# ಸಪ್ತಗಿರಿ

ಬೆಲೆ : ರೂ ೧
ಜೂನ್ '1987.




ತಿರುಮಲೆ ತಿರುಪತಿ ದೇವಸ್ಥಾನಗಳ ಸಚಿತ್ರ ಮಾಸ ಪತ್ರಿಕೆ



ಬಾರೊ ಮನೆಗೆ ಗೋವಿಂದ ನಿನ್ನಂಘ್ರಿಕಮಲವ
ತೋರೊ ಎನಗೆ ಮುಕುಂದ
ನಲಿದಾಡು ಮನದಲಿ ಮಾರಪಿತ ಆನಂದ ನಂದನ್ನ ಕಂದ ॥ಪ॥

ಚಾರುತರ ಶರೀರ ಕರುಣಾವಾರಿನಿಧಿ ಭವಘೋರನಾಶನ
ವಾರಿಜಾಸನ ವಂದ್ಯ ನೀರಜ ಸಾರಸದ್ಗುಣ ಹೇ ರಮಾಪತೇ ॥ಅ ಪ॥

ನೋಡೊ ದಯದಿಂದೆನ್ನ ಕರಪದುಮ ಶಿರದಲಿ ನೀಡೊ ಭಕ್ತ ಪ್ರಸನ್ನ
ನಲಿದಾಡೊ ಮನದಲಿ, ಬೇಡಿಕೊಂಬೆನೊ ನಿನ್ನ, ಆನಂದ ಘನ್ನ
ಮಾಡದಿರು ಅವಮಾನವ, ಕೊಂಡಾಡುವೆನು ತವ ಮಹಿಮೆಗಳನು
ಜೋಡಿಸುವೆ ಕರಗಳನು ಚರಣಕೆ, ಕೂಡಿಸೊ ತವ ದಾಸ ಜನರೊಳು

ಹೇಸಿ ವಿಷಯಗಳಲ್ಲಿ ತೊಳಲಾಡಿ ನಾ ಬಲು ಕ್ಲೇಶ ಪಡುವುದ ಬಲ್ಲೆ
ಧನಯುವತಿ ಸುಖ ಲೇಸು ಎಂಬುದನು ಕೊಲ್ಲಿ ಆಶೆ ಬಿಡಿಸಿಲ್ಲಿ
ಏಸು ಜನುಮದ ದೋಷದಿಂದಲಿ ಈಸುವೆನು ಇವರೊಳಗೆ ಇಂದಿಗೆ
ಮೋಸವಾಯಿತು ಅದುದಾಗಲಿ ಶ್ರೀಶ ನೀ ಕೈಪಿಡಿದು ರಕ್ಷಿಸು -2-

ನೀನೆ ಗತಿಯೆನಗಿಂದು ಉದ್ಧರಿಸೋ ಬೇಗನೆ ದೀನಜನಬಂಧು
ನಾನಿನ್ನ ಸೇವಕ ಶ್ರೀನಿವಾಸಾ ಎಂದೆಂದು ಕಾರುಣ್ಯಸಿಂಧು
ಪ್ರಾಣಪತಿ ಹೃದಯಾಬ್ಜ ಮಂಟಪಸ್ಥಾನದೊಳಗತಿವ್ಯಾಪ್ತ ಚಿನುಮಯ
ಧ್ಯಾನಗೋಚರನಾಗು ಕಣ್ಣಲಿ ಕಾಣುವೆನು ಶ್ರೀರಂಗವಿಠಲ -3-

— ಶ್ರೀ ಶ್ರೀಪಾದರಾಜರು.

# ತಿರುಮಲೆಯಲ್ಲಿ ವಸತಿ ಸೌಲಭ್ಯ

ಸರ್ವತೋಮುಖವಾಗಿ ಏರಿದ ದರಗಳ ಹಿನ್ನೆಲೆಯಲ್ಲಿ ತಿರುಮಲೆಯಲ್ಲಿನ ತಿ. ತಿ. ದೇವಸ್ಥಾನಗಳ ವಸತಿ ಸೌಲಭ್ಯದ ದರಗಳನ್ನು ಪುನರ್ವಿಮರ್ಶಿತಗೊಳಿಸಲಾಗಿದೆ. ತಿರುಮಲೆಯಲ್ಲಿ ದೊರೆಯುವ ವಸತಿಗಳ ಬಾಡಿಗೆಯ ಪರಿಷ್ಕೃತ ದರಗಳನ್ನು ಕೆಳಗೆ ಸೂಚಿಸಲಾಗಿದೆ. ಯಾತ್ರಿಕರು ದಯವಿಟ್ಟು ಗಮನಿಸಿ ಸಹಕರಿಸಬೇಕಾಗಿ ವಿನಂತಿ.

| ವಸತಿ – ಸ್ಥಳ | | ಪರಿಷ್ಕೃತ ಬಾಡಿಗೆ/ದಿನಕ್ಕೆ |
|---|---|---|
| ವಿಶೇಷರೀತಿಯ ಕಾಟೇಜುಗಳು | ರೂ | 100–00 |
| ಟಿ. ಬಿ. ಒಳಗಿನ ಕಾಟೇಜುಗಳು | ರೂ | 70–00 |
| ಟಿ. ಬಿ. ಹೊರಗಿನ ಕಾಟೇಜುಗಳು | | |
| ಮೂರನೆಯ ಸಾಲೂ ಸೇರಿದಂತೆ : | | |
| ಎ ವಿಭಾಗ– ಗ್ಯೆಸರ್‌ನೊಂದಿಗೆ | ರೂ | 20-00 |
| ಬಿ ವಿಭಾಗ– ಗ್ಯೆಸರ್ ರಹಿತ | ರೂ | 12–00 |
| ವಿ.ವಿ.ಸಿ. ಹಾಗೂ ಎಂ.ಬಿ.ಸಿ. 31 ಹಾಗೂ 26 | ರೂ | 70–00 |
| ಎಂ.ಬಿ.ಸಿ. ಎ–ಭಾಗ ಗ್ಯೆಸರ್‌ನೊಂದಿಗೆ | ರೂ | 20–00 |
| ಎಂ.ಬಿ.ಸಿ. ಬಿ–ಭಾಗ ಗ್ಯೆಸರ್ ರಹಿತ | ರೂ | 12–00 |
| ಟಿ.ಬಿ. ಸೂಟ್‌ಗಳು ಗ್ಯೆಸರ್‌ನೊಂದಿಗೆ | ರೂ | 15–00 |
| ಎ.ಟಿ.ಸಿ ಸೂಟ್‌ಗಳು ಗ್ಯೆಸರ್ ರಹಿತ | ರೂ | 10–00 |
| ಎ.ಟಿ.ಸಿ. ನೆಲ ಅಂತಸ್ತು | | |
| ಎ–ಭಾಗ ಮೊದಲ ಅಂತಸ್ತಿನಲ್ಲಿಯಂತೆ | ರೂ | 30-00 |
| ಬಿ–ಭಾಗ | ರೂ | 30–00 |
| ಎಸ್.ಎಂ.ಸಿ., ಎಸ್.ಎನ್.ಸಿ, ಎ.ಎನ್.ಸಿ, | | |
| ಜಿ.ಎನ್.ಸಿ, ಎಚ್.ವಿ.ಸಿ : | | |
| ಎ–ಭಾಗ ಗ್ಯೆಸರ್ ರಹಿತ | ರೂ | 12–00 |
| ಬಿ–ಭಾಗ ” | ರೂ | 12–00 |
| ಎಚ್.ವಿ.ಡಿ.ಸಿ. ಸೂಟ್ಸ್ (ಪ್ರತಿಯೊಂದು) | | |
| ಗ್ಯೆಸರ್ ನೊಡನೆ | ರೂ | 25–00 |
| ಎಚ್ ವಿ.ಸಿ. ಸೂಟ್ಸ್ (ಪ್ರತಿಯೊಂದು) | | |
| ಗ್ಯೆಸರ್‌ರಹಿತ | ರೂ | 12-00 |
| ಎಚ್.ವಿ.ಸಿ. ಅತಿಥಿಗೃಹ ದೊಡ್ಡ ಸೂಟ್ | | |
| (ಗ್ಯೆಸರ್‌ನೊಡನೆ) | ರೂ | 50–00 |
| ” ” ಸಣ್ಣ ಸೂಟ್ | | |
| (ಗ್ಯೆಸರ್ ರಹಿತ) | ರೂ | 25–00 |
| ಎಸ್.ವಿ. ಅತಿಥಿಗೃಹ ದೊಡ್ಡ ಸೂಟ್ | ರೂ | 70–00 |
| ” ” ಮೂಲೆ ಸೂಟ್ | ರೂ | 60–00 |
| ” ” ಇತರೆ | ರೂ | 50–00 |
| ಎನ್.ಜಿ. ಅತಿಥಿಗೃಹ I ಹಾಗೂ II | | |
| ಮೂಲೆ ಸೂಟ್ | ರೂ | 60–00 |

| | | |
|---|---|---|
| ಇತರೆ | ರೂ | 50–0 |
| ಎಚ್.ಆರ್.ಜಿ. ಪೂರ್ತಿ ಕಾಟೇಜು | ರೂ | 250–0 |
| ಎಸ್. ಪಿ. ಅತಿಥಿಗೃಹ : | | |
| ಮಾಸ್ಟರ್ ಸೂಟ್ ಸಂ. 9 ಹಾಗೂ | | |
| ಕಿರಿಯ ಸೂಟ್‌ಗಳು ಸಂ. 7, 9 ಪರಿಷ್ಕರಣವಿಲ್ಲ | ರೂ | 750-0 |
| ಮಾಸ್ಟರ್ ಸೂಟ್ ಸಂ. 1 | | |
| ಕಿರಿಯ ಸೂಟ್ ಸಂ. 6 ” | | |
| ಕಿರಿಯ ಸೂಟ್‌ಗಳು ಸಂ–2, 3, 4, | ರೂ | 750-0 |
| ಶ್ರೀನಿಕೇತನ (ಪ್ರತಿ ಸೂಟ್), | | |
| ಎಸ್.ಪಿ. ನಗರ್ ಅತಿಥಿಗೃಹ ನಂ.-IV | ರೂ | 250–0 |
| ಇಂದಿರಾ ಅತಿಥಿಗೃಹ (ಎ. ಸಿ.) (ಪ್ರತಿಸೂಟ್) | | |
| (ಎಸ್. ಪಿ. ನಗರ್ ಅತಿಥಿಗೃಹ ನಂ–II) | ರೂ | 250–0 |
| ಬಾಲಕುಟೀರಂ (ಎ.ಸಿ.) (ಪ್ರತಿಸೂಟ್) | | |
| (ಎಸ್. ಪಿ. ನಗರ್ ಅತಿಥಿಗೃಹ ನಂ–III) | ರೂ | 250–0 |
| ಗೋಕುಲಂ (ಎ. ಸಿ.) | ರೂ | 500–0 |
| ಮದುವೆಯ ಹಾಲ್‌ಗಳು–ದಿನವೊಂದಕ್ಕೆ (ಪ್ರತಿಯೊಂದು): | | |
| ಎಸ್.ಎಂ.ಸಿ. 272, 260, 266, 267 | ರೂ | 75–0 |
| ರೂಯಾ 248 | ರೂ | 100–0 |
| ಗೋಗಿನೇನಿ 226 | ರೂ | 100–0 |
| ಚಿದಂಬರಂ ಚೆಟ್ಟಿಯಾರ್ ಕಾಟೇಜಿ | ರೂ | 125–0 |
| ಎ. ಟಿ. ಸಿ.– 9 | ರೂ | 100–0 |
| ಟಿ. ಬಿ. ಸಿ. 136, 152, 71 | ರೂ | 75-0 |
| ಬಾಲಾಜಿ ಕಲ್ಯಾಣ ಮಂಟಪ | ರೂ | 500–0 |
| ಸೀತಾರಾಮ ಕಲ್ಯಾಣ ಮಂಟಪ | ರೂ | 1000–0 |
| ಹೊಸದಾಗಿ ನಿರ್ಮಿತವಾದುವು : | | |
| ಟಿ.ಬಿ.ಸಿ., ಎ.ಟಿ.ಸಿ. ಪೂರ್ತಿ ಕಾಟೇಜು | ರೂ | 60–0 |
| ಮೊದಲ ಅಂತಸ್ತಿನ | | |
| ಕಾಟೇಜುಗಳು ಅರ್ಧ ಕಾಟೇಜು | ರೂ | 30–0 |
| ಎಸ್. ಎನ್. ಅತಿಥಿಗೃಹ ಪ್ರತಿ ಸೂಟ್ | ರೂ | 50–0 |
| ರಾಮಬಗೀಚಾ ಅತಿಥಿಗೃಹ ” | ರೂ | 50–0 |

ಯಾತ್ರಿಕರು ಸಹಕರಿಸಬೇಕೆಂದು ಕೋರಲಾಗಿದೆ — ಮುಂಗಡ ಕಾಯ್ದಿರಿಸುವಿಕೆಗಾಗಿ ಬರೆಯಿರಿ.

ಉಪಕಾರ್ಯನಿರ್ವಹಣಾಧಿಕಾರಿ (ಸ್ವಾಗತ-I

ತಿ. ತಿ. ದೇವಸ್ಥಾನಗಳು, ತಿರುಮಲೆ.




ಗೌರವ ಸಂಪಾದಕರು :

ಶ್ರೀ ಸಿ.ಎಚ್. ವೆಂಕಟಪತಿರಾಜು ಐ.ಎ.ಎಸ್.,

ಸಂಪಾದಕ :

ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ :

ಬಿ ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ :

ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ
ಸಂಪಾದಕರು,
ತಿರುಮಲ ತಿರುಪತಿ ದೇವಸ್ಥಾನಗಳು,
ತಿರುಪತಿ


ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ ದೊರೆಯುವುವು

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**

ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. —ಸಂ॥


ಸಂಪುಟ ೧೮] ಜೂನ್ ೧೯೮೭ [ಸಂಚಿಕೆ ೧


# ವಿಷಯಸೂಚಿ



ಮುಖಚಿತ್ರ : ವಾಗ್ಗೇಯಕಾರ ಭಾರತ.

ಹಿಂಬದಿಯಲ್ಲಿ : ಹದಿನೆಂಟನೆಯ ವರ್ಷದಲ್ಲಿ ಸಪ್ತಗಿರಿ

ಒಳಗಡೆ : ಶ್ರೀ ಅನ್ನಮಾಚಾರ್ಯ ಜಯಂತಿ ಸಪ್ತಾಹದ ಆರಂಭೋತ್ಸವ ಹಾಗೂ ಸಪ್ತಾಹಸಮಾಪ್ತಿಯ ಚಿತ್ರಗಳು.

**ಸಪ್ತಗಿರಿಯ ಬಗ್ಗೆ ನಿಮ್ಮ ಅಭಿಪ್ರಾಯಗಳಿಗೆ ಸ್ವಾಗತವಿದೆ**

# ಸಂಪಾದಕೀಯ

20 ನೇ ಶತಮಾನದ ಕೊನೆಯ ಭಾಗದಲ್ಲಿ ನಿಂತು ಮನಃಕಾಲ ನಡೆದು ಬಂದ ಹಾದಿಯತ್ತ ಹಿಮ್ಮರಳಿ ಒಮ್ಮೆ ಸಿಂಹಾವಲೋಕನ ಮಾಡಿದಲ್ಲಿ ಮಾನವನ ಮುನ್ನಡೆಯ ಬಗ್ಗೆ ದಿಗ್ಭ್ರಮೆ ಮೂಡುತ್ತದೆ. ಜೊತೆಯಲ್ಲೇ ಹುಟ್ಟಿ ಪರಂಪರೆಯಿಂದ ಸಹಜೀವನ ನಡೆಸುತ್ತಲೇ ಬಂದ ಪಶು ಪಕ್ಷಿ ತರು ಕಾನನ ಗಿರಿ ನದಿಗಳ ಜೊತೆ ಹೋಲಿಸಿಕೊಂಡು ನೋಡಿದಾಗ ಎಷ್ಟು ಎತ್ತರಕ್ಕೆ ಏರಿದೆ ಮನುಷ್ಯಜೀವನ ಎಂಬುದು ಕಣ್ಣಿಗೆ ಎದ್ದು ಕಾಣುವಂತಾಗಿ, ಇದೆಲ್ಲ ಬೆಳವಣಿಗೆಯನ್ನು ನಾವು ಗುರುತಿಸದೆಯೇ ಸಹಜವೆನ್ನುವಂತೆಯೇ–ನಡೆದಿರುವೆವಲ್ಲ ಎಂಬ ಅಚ್ಚರಿಯೂ ಮೂಡುತ್ತದೆ.

ಆದರೆ ಈ ಎಲ್ಲ ಬೆಳವಣಿಗೆಯ ಉತ್ಥಾನದ–ಹಿಂದೆ ಅನೇಕ ಮಹಾತ್ಮ, ಋಷಿ ಕವಿ, ಸಂತ, ವಿಜ್ಞಾನಿ, ಕಲೆಗಾರರ, ಅವ್ಯಾಹತವಾದ ಕೃಷಿಯಿದೆ ಎಂಬುದನ್ನು ಗಮನಿಸಬೇಕು. ಐಹಿಕ ಸುಖ, ಸಮೃದ್ಧಿ, ಐಭೋಗಗಳಿಗೆ ಲೌಕಿಕ ವಿಜ್ಞಾನಗಳ ನೆರವನ್ನು ಮನುಷ್ಯ ನಿರಂತರವಾಗಿ ಪಡೆಯುವಂತೆಯೇ ಅವುಗಳ ವಿತರಣೆ ಸಮರ್ಪಕವಾಗಿಲ್ಲದೆ, ಅವುಗಳ ಸೌಲಭ್ಯ ಅತಿಯಾಗಿಯೋ ಆದಾಗ ಉಂಟಾಗುವ ಭಿನ್ನಾಭಿಪ್ರಾಯ, ಅತೃಪ್ತಿ, ಅಸಾಂಗತ್ಯಗಳ ನಿವಾರಣೆಗಾಗಿ ಅಧ್ಯಾತ್ಮ ವಿಜ್ಞಾನಗಳ ನೆರವನ್ನೂ ಕಾಲದಿಂದ ಕಾಲಕ್ಕೆ ಪಡೆದು ಶಾಂತಿ, ಸಮತೆ, ಸೌಹಾರ್ದ್ರತೆಗಳತ್ತ ನಡೆಯಲಾಗಿದೆ ಎಂಬುದೂ ಅಷ್ಟೇ ಸತ್ಯ. ಮನುಷ್ಯನ ಜೀವನಕ್ಕೆ ಆಹಾರ ನಿದ್ರಾಭಯ ಮೈಥುನಗಳ ವಿಷಯದಲ್ಲಿ ಮುಖ್ಯವಾಗಿ ಬೇಕಾದ್ದು ತೃಪ್ತಿ, ಆ ಮೂಲಕವಾಗಿ ಉಂಟಾಗಬಹುದಾದ ಶಾಂತಿ. ಇದನ್ನು ಪಡೆಯಲು ಇರುವುದು ಜಗತ್ಕವಿಗಳ, ಋಷಿ, ಸಂತರ, ಸಾಂತ್ವನದ ನುಡಿದೀವಿಗೆಗಳು.

ಭಾರತೀಯ ಜೀವನದಲ್ಲಿ ಸಂಗೀತಕ್ಕೆ ಹೆಚ್ಚಿನ ಪ್ರಾಮುಖ್ಯ ನೀಡಲಾಗಿದೆಯೆಂದರೆ ಅದಕ್ಕೆ ಕಾರಣ ಅದರಿಂದ ಸರ್ವರೂ ಶಾಂತಿಯನ್ನು ಆ ಮೂಲಕ ಸೌಹಾರ್ದತೆಯನ್ನು ಪಡೆಯಬಹುದು ಎಂಬುದೇ ಆಗಿದೆ. ಕಾಲದಿಂದ ಕಾಲಕ್ಕೆ ಭಾರತದಲ್ಲಿ ಭಕ್ತ ಕವಿಗಳು, ಸಂತಕವಿಗಳು ಅವತರಿಸಿ ಸುತ್ತಣ ಜನಕ್ಕೆ ತಮ್ಮ ಕೃತಿಗಳ ಮೂಲಕ ಶಾಂತಿಯನ್ನು, ತೃಪ್ತಿ ಭಾವವನ್ನು ಹಂಚಿದ್ದಾರೆ ಎಂದರೆ ಅತಿಶಯೋಕ್ತಿಯೇನಲ್ಲ.

ಅನ್ನಮಾಚಾರ್ಯರು ಇಲ್ಲೇ, ನಮ್ಮಲ್ಲೇ, ನಮ್ಮಂತೆಯೇ ಇದ್ದು ಎತ್ತರಕ್ಕೆ ಬೆಳೆದವರು ಶ್ರೀ ವೆಂಕಟೇಶ್ವರಸ್ವಾಮಿಯ ಅದ್ವಿತೀಯ ಭಕ್ತರಾಗಿ ತಮ್ಮ ಆತ್ಮೋದ್ಧಾರ ಮಾರ್ಗವನ್ನು ಕಂಡುಕೊಂಡದ್ದೇ ಅಲ್ಲದೆ, ಸುತ್ತಣ ಜನಕ್ಕೂ ಉದ್ಧಾರದ ಸಮಾನತೆಯ ಮಾರ್ಗವನ್ನು ತೋರಿಸಿಕೊಟ್ಟವರು. ಅವರ ಜಯಂತಿಯ ಆಚರಣೆಯಿಂದ ಇಂದಿನ ಪ್ರಕ್ಷುಬ್ಧ ವಾತಾವರಣದಲ್ಲಿ ತುಸುವಾದರೂ ಶಾಂತಿ ಮೂಡೀತು ಎಂಬುದು ಆಶಯ. ಅಂತಹ ವಾಗ್ಗೇಯಕಾರರು ಅಲ್ಲಿಂದಲ್ಲಿಗೆ ಆಗಿಂದಾಗ್ಗೆ ಭಾರತದಲ್ಲಿ ಬಹುವಾಗಿ ಕಾಣಿಸಿಕೊಂಡದ್ದನ್ನು ನೆನೆಸಿಕೊಂಡರೆ ಸಮುದ್ರದಿಂದ ಹಿಮನಗದವರೆಗಿನ ಜನ–ಸಂಸ್ಕೃತಿ ಎಲ್ಲ ಒಂದೇ ಎಂಬ ಮಾತು ಅವಧಾರಣೆಗೊಂಡು ಸಹಬಾಳ್ವೆ, ಸೌಹಾರ್ದ ಹೆಚ್ಚಾದೀತು ಎಂಬುದು ಆಶಯ.

ಭರತ ಭೂಮಿಯ ಜೀವನ ಶಾಂತಿ ಸುಖಮಯವಾಗಲಿ ಆ ಮೂಲಕ ಜಗತ್ತಿಗೂ ಒಳಿತಾಗಲಿ ಎಂಬುದೇ ಈ ಅನ್ನಮಾಚಾರ್ಯ ಜಯಂತಿಯ ಸಂದರ್ಭದಲ್ಲಿ ಪ್ರಾರ್ಥನೆಯಾಗಬೇಕು, ಪ್ರಯತ್ನವಾಗಬೇಕು. ಅದಕ್ಕೆ ಸ್ವಾಮಿ ಶಕ್ತಿಯನ್ನು ನೀಡಲಿ ಎಂದು ಕೇಳಿಕೊಳ್ಳುವ.

# ವಿಶ್ವಧರ್ಮ - ಪ್ರಪತ್ತಿ

ಧರ್ಮ ಎಂಬ ಪದದ ಅರ್ಥ ಬಹಳ ವ್ಯಾಪಕವಾದುದು. ಧರಿಸು, ಆದರಿಸು, ಸಂರಕ್ಷಿಸು, ನಿರ್ವಹಿಸು, ಆಚರಿಸು–ಇತ್ಯಾದಿ ಅರ್ಥಗಳನ್ನು ಧರ್ಮ ಪದವು ಒಳಗೊಂಡಿದೆ. ಇದು ಆತ್ಮ ಅಥವ ಜೀವನಿಗೆ ಸಂಬಂಧಪಟ್ಟ ತತ್ತ್ವ ಎಂದು ಪರಿಗಣಿಸಲಾಗಿದೆ. ಆತ್ಮನಿಂದ ಬರುವ ಧ್ವನಿಯೇ ಧರ್ಮ ಎಂದು ಹೇಳಬಹುದು. ಇದನ್ನು ಭಾಷಾಂತರ ಮಾಡಬಹುದಾದರೆ ಇದು ಕರ್ತವ್ಯ, ಶ್ರೇಷ್ಠ ಭಾವನೆ, ನೈತಿಕಕರ್ಮ, ಧಾರ್ಮಿಕ ನೀತಿ, ದೇವತಾ ನ್ಯಾಯ, ಉತ್ತಮ ನಡತೆ, ಸಾಮಾಜಿಕ ಪದ್ಧತಿ – ಇತ್ಯಾದಿ ಅರ್ಥಗಳೆಲ್ಲ ಇದರಲ್ಲಿ ಸೇರಿವೆ.

ಧರ್ಮಕ್ಕೆ ಮೂಲಭೂತವಾದುದು ಮನಸ್ಸಿನ ಪ್ರೇರೇಪಣೆ. ಈ ಒತ್ತಡ ಹುಟ್ಟಿದರೆ, ಮಾನವನು ಅದನ್ನು ತಪ್ಪದೆ ಪಾಲಿಸುತ್ತಾನೆ. ಜೀವನದ ಧ್ಯೇಯವೇನು? ಧರ್ಮ, ಅರ್ಥ, ಕಾಮ, ಮೋಕ್ಷವೆಂಬ ಪುರುಷಾರ್ಥಗಳನ್ನು ಸಾಧಿಸುವುದು. ಇವು ಮನಸ್ಸಿನ ಭಾವನೆ ಅಥವ ಪ್ರವೃತ್ತಿ, ಇವನ್ನು ಪರಿಶುದ್ಧಗೊಳಿಸಬೇಕು. ದೋಷರಹಿತವನ್ನಾಗಿ ಮಾಡಬೇಕು. ಸಮಾಜಕ್ಕೆ ಹೊಂದಿಕೊಂಡಿರುವಂತೆ ಇವನ್ನು ಪರಿವರ್ತಿಸಬೇಕು. ಮಾನವಧರ್ಮ ವಿಶಾಲವಾದುದು. ಇಡೀ ವಿಶ್ವದಲ್ಲಿ ಮಾನವನಿದ್ದಾನೆ. ಅವನ ಧರ್ಮ ವಿಶ್ವಧರ್ಮ. ಇಂತಹ ಧರ್ಮವನ್ನು ಎಲ್ಲರೂ ಅನುಸರಿಸುವಂತಿರಬೇಕು. ಎಲ್ಲರಿಗೂ ಸಮಾನವಾಗಿರಬೇಕು. ಈ ದೃಷ್ಟಿಯಿಂದ ಧರ್ಮದ ಸ್ವರೂಪವನ್ನು ವಿಚಾರ ಮಾಡಬೇಕು.

ಮಾನವಕೋಟಿಗೆ ಅನ್ವಯವಾಗುವ ಕೆಲವು ಧರ್ಮಗಳಿವೆ. ಇವು ಎಲ್ಲರಿಗೂ, ಎಲ್ಲ ದೇಶಕ್ಕೂ ಅನ್ವಯವಾಗುವಂತೆ ಸಮಾನವಾಗಿರಬೇಕು, ಸರ್ವಭೂತಗಳ ಪ್ರಗತಿಗಾಗಿ ಧರ್ಮ ವಿಹಿತವಾಗಿದೆ. ಸರ್ವಪ್ರಾಣಿಗಳಿಗೆ ಹಿತವನ್ನು ಕೊಡುವುದು ಧರ್ಮ. ಇದು ಎಲ್ಲ ಜೀವಿಗಳಿಗೂ ಮೂಲಾಧಾರ. ಅರ್ಥ, ಕಾಮಗಳು ಧರ್ಮಕ್ಕೆ ನೆರವಾಗಬೇಕು. ಮೋಕ್ಷ ಎಂದರೆ ಪರಮಾತ್ಮನ ಸಾನ್ನಿಧ್ಯದಲ್ಲಿ ನಿರತಿಶಯ ಆನಂದ ಪಡೆಯುವುದು.

ಭಾರತದಲ್ಲಿ ಮಾನವನು ವ್ಯಕ್ತಿ ಸುಖಕ್ಕಾಗಿಯೇ ಆಸೆಪಟ್ಟವನಲ್ಲ–"ಸರ್ವೇಜನಾಃ ಸುಖಿನೋ ಭವಂತು ಸಮಸ್ತ ಸನ್ಮಂಗಳಾನಿ ಭವಂತು" ಎಂಬುದು ಅವನ ಜೀವನದ ಗುರಿ. ಸಮಾಜ ಮತ್ತು ವ್ಯಕ್ತಿ, ಇವೆರಡನ್ನು ಸಂಯೋಜಿಸುವ ಕೊಂಡಿಯೇ ಧರ್ಮ ಎಂದು ಹೇಳಬಹುದು. ಇದನ್ನು ಜಾತಿ, ಕುಲ, ಮತಗಳಿಗೇ ಅನ್ವಯವಾಗುವಂತೆ, ಇದರ ವ್ಯಾಪ್ತಿಯನ್ನು ಮಿತಿಗೊಳಿಸಬಾರದು.

ಯಾವಾಗಲೂ ವಂಚನೆ ಮಾಡದಿರುವುದು. ನಾಯಕ ಪ್ರವರ್ತನೆಯಿಂದ ನಡೆಯುವುದು, ವಿಷಯಾಭಿಲಾಷೆ ತೊರೆಯುವುದು. ತಮ್ಮನ್ನು ಇತರರು ನಿಂದಿಸಿದರೆ ಪ್ರತಿ ಆಚರಿಸದಿರುವುದು. ಇತರರು ಹಿಂಸಿಸುತ್ತಿದ್ದರೆ, ಅವರಿಗೆ ಕೇಡು ಬಯಸದಿರುವುದು. ಆಸೆಯಿಂದ ದಾನವಮಾಡದಿರುವುದು, ಮನೋವಾಕ್ಕಾಯಗಳಿಂದ ಪಾಪಮಾಡದಿರುವುದು. ಸತ್ಯವನ್ನೇ ಹೇಳುವುದು, ಸರ್ವಭೂತಗಳನ್ನು ಸಮದೃಷ್ಟಿಯಿಂದ ಕಾಣುವುದು, ಪ್ರಶಾಂತ ಮನಸ್ಸಿನಿಂದ ಎಲ್ಲ ಧರ್ಮಗಳನ್ನು ಕೇಳುವುದು ಮತ್ತು ಆಚರಿಸುವುದು–ಇವೆಲ್ಲ ಧರ್ಮದ ಸ್ವರೂಪ. ಅಂದರೆ ಧರ್ಮವೇ ಎಲ್ಲಕ್ಕೂ ಮೂಲವೆಂದಾಯಿತು ಸಮತ್ವ, ದಯೆ, ಕ್ಷಮೆ, ಶಾಂತಿ, ತ್ಯಾಗ, ಧೈರ್ಯ, ಅಹಿಂಸೆ–ಇತ್ಯಾದಿ ಗುಣಗಳು ಧರ್ಮದ ಲಕ್ಷಣ ಎಂದಾಗುವುದು. ಯಜ್ಞ, ಅಧ್ಯಯನ, ದಾನ, ತಪಸ್ಸು, ಸತ್ಯ, ಧೈರ್ಯ, ಕ್ಷಮೆ, ಅಲೋಭ–ಇತ್ಯಾದಿಗಳು ಧರ್ಮದ ಮಾರ್ಗಗಳಾಗಿವೆ.

ಧರ್ಮಃಶ್ರುತೋವಾ ದೃಷ್ಟೋವಾ
ಸ್ಮೃತೋವಾ ಕಥಿತೋಪಿ ವಾ,
ಸಂಮೋದಿತೋವಾ ರಾಜೇಂದ್ರ
ಪುನಾತಿ ಪುರುಷಂ ಸದಾ ॥

ಕೇಳಿದರೂ, ನೋಡಿದರೂ, ನೆನಪು ಮಾಡಿಕೊಂಡರೂ, ಹೇಳಿದರೂ, ಅನುಮೋದಿಸಿದರೂ, ಸಹ ಧರ್ಮವು ಯಾವಾಗಲೂ ಮಾನವನನ್ನು ಕಾಪಾಡುತ್ತದೆ.

ಧೃತಿಃಕ್ಷಮಾದಮೋಽಸ್ತೇಯ
ಶೌಚಮಿಂದ್ರಿಯ ನಿಗ್ರಹಃ ।
ಧೀರ್ವಿದ್ಯಾ ಸತ್ಯಮಕ್ರೋಧೋ
ದಶಕಂ ಧರ್ಮಲಕ್ಷಣಂ ॥

ಧೈರ್ಯ, ಕ್ಷಮಾ, ಇಂದ್ರಿಯನಿಗ್ರಹ, ಶುಚಿತ್ವ, ಇಂದ್ರಿಯ ಜಯ, ಬುದ್ಧಿ, ವಿದ್ಯೆ, ಸತ್ಯ, ಕೋಪವಿಲ್ಲದಿರುವುದು, ಕದಿಯದಿರುವುದು – ಇವು ಹತ್ತು ಧರ್ಮದ ಲಕ್ಷಣಗಳು

ಅಸ್ಥಿರಂ ಜೀವಿತಂ ಲೋಕೇ
ಅಸ್ಥಿರೇ ಧನ ಯೌವನೇ ।
ಅಸ್ಥಿರಾ ಪುತ್ರ ದಾರಾಶ್ಚ
ಧರ್ಮಃ ಕೀರ್ತಿರ್ದ್ವಯಂಸ್ಥಿರವಸ್ ॥

**ಶ್ರೀ ಡಿ. ಕೃಷ್ಣೈಂಗಾರ್**

ಲೋಕದ ಬಾಳು ಸ್ಥಿರವಲ್ಲ. ಧನವಾಗಲಿ, ಯೌವನವಾಗಲಿ ಸ್ಥಿರವಲ್ಲ. ಮಡದಿ ಮಕ್ಕಳು ಸ್ಥಿರವಲ್ಲ. ಧರ್ಮ, ಮತ್ತು ಕೀರ್ತಿ ಇವೆರಡು ಮಾತ್ರ ಸ್ಥಿರವಾದುವು.

ಭಾರತೀಯ ಅಧ್ಯಾತ್ಮಿಕ ಶೋಧನೆ, ಅತ್ಯಂತ ಪ್ರಾಚೀನ, ಮತ್ತ ದೀರ್ಘಕಾಲದ ಬೌದ್ಧಿಕ ಮತ್ತು ಭಾವಾತ್ಮಕ ವಿಕಾಸದ ಫಲ. ಇದರಿಂದಾಗಿ ಜೀವನದ ಮುಖ್ಯಗುರಿ ಪುರುಷಾರ್ಥಗಳೆಂದು ಅಂಗೀಕರಿಸಲ್ಪಟ್ಟವೆ. ಧರ್ಮವೊಂದೇ ಪುರುಷಾರ್ಥವಾಗುವುದಿಲ್ಲ. ಸಾಮಾನ್ಯರಿಗೆ ಅರ್ಥ ಕಾಮಗಳೂ ಬೇಕು. ಇವು ಮೂರೂ ತಮ್ಮ ತಮ್ಮ ಎಲ್ಲೆಯನ್ನು ಮೀರದಂತೆ ಬೆಳೆದು ಸಮನ್ವಯ ಹೊಂದಿ ಅಂತಿಮ ಪುರುಷಾರ್ಥ–ಮೋಕ್ಷಕ್ಕೆ ಸಾಧನವಾಗಬೇಕು.

ಸರ್ವ ನಿಯಾಮಕವೂ, ಸರ್ವಶಕ್ತವೂ, ಸರ್ವೋತ್ತಮವೂ ಆದ ತತ್ತ್ವ ಒಂದು ಇದೆ ಎಂದು ಒಪ್ಪುವುದು ಅಧ್ಯಾತ್ಮಿಕ ಮಾರ್ಗದಲ್ಲಿ ಮುಖ್ಯವಾದ ಮೊದಲನೆಯ ಹೆಜ್ಜೆ, ಭಾರತೀಯ ವೇದಾಂತಗಳೇ ಅಲ್ಲದೆ, ಪಾಶ್ಚಾತ್ಯ ಸಿದ್ಧಾಂತಗಳೂ ಇದನ್ನು ಅನುಮೋದಿಸಿವೆ. ಅನೇಕ ಆಧುನಿಕ ವಿಜ್ಞಾನಿಗಳು, ಈ ಮೂಲ ತತ್ತ್ವವನ್ನು ಒಪ್ಪದೇ ಇಲ್ಲ. ಅಂದ ಮೇಲೆ ಮಾನವ ಜನಾಂಗದ ಬಹು ಭಾಗ, ಈ ಅಂಶವನ್ನು ಅಂಗೀಕರಿಸಿದೆ ಎಂದಾಯಿತು. ಈ ಪರತತ್ತ್ವದ ಸ್ವರೂಪ ಎಂತಹುದು? ಲಕ್ಷ್ಮೀನಾರಾಯಣನೇ? ಶಿವಪಾರ್ವತಿಯರೇ? ಇತ್ಯಾದಿ ಜಿಜ್ಞಾಸೆ ಎರಡನೆಯದು.

ಲಕ್ಷ್ಮೀನಾರಾಯಣ ಸ್ವರೂಪನಾದ ಪರಬ್ರಹ್ಮನು ಸರ್ವಜ್ಞನು, ಸರ್ವಶಬ್ದ ವಾಚ್ಯನು, ಸರ್ವವ್ಯಾಪಿಯು, ಸರ್ವಶಕ್ತನು, ಸರ್ವೇಶ್ವರನು, ಸೃಷ್ಟಿಸ್ಥಿತಿಲಯಕಾರಣನು, ಜಗತ್ತಿಗೆ ಉಪಾದಾನ ಮತ್ತು ನಿಮಿತ್ತ ಕಾರಣನು – ಎಂಬುದು ವಿಶಿಷ್ಟಾದ್ವೈತ ದರ್ಶನದ ಸಮನ್ವಯ ದೃಷ್ಟಿಯ ಫಲವಾಗಿದೆ. ಇದನ್ನು ಅಂಗೀಕರಿಸದೇ ಇರುವವರಿಗೂ ಕೂಡ, ಪರತತ್ತ್ವವು ವಿಶ್ವಧರ್ಮದ ಅಂಶವಾಗಿರಲು ಅಡ್ಡಿಯಿಲ್ಲ.

ಪರಬ್ರಹ್ಮ ವಸ್ತುವಿಗೂ ಜಗತ್ತಿಗೂ ಸಂಬಂಧವೇನು? ಜೀವಾತ್ಮ ಬೇರೆಯೇ, ಅಲ್ಲವೇ? ಬೇರೆಯಾದರೆ ಪರಮಾತ್ಮನಿಗೂ, ಜೀವಾತ್ಮನಿಗೂ ಇರುವ ಸಂಬಂಧವೇನು? ಜೀವಾತ್ಮ ಸ್ವರೂಪ ಎಂತಹುದು? ಮೋಕ್ಷವೇ ಅಂತಿಮ ಗುರಿಯಾದರೆ

ಆದರ ಸ್ವರೂಪ ಹೋಗಿರುವುದು ? ಇತ್ಯಾದಿ ಪ್ರ
ಗಳಿಗೆ ವಿಶಿಷ್ಟಾದ್ವೈತ ದರ್ಶನವು ಗಮನಾರ
ವಾದ ಉತ್ತರ ನೀಡುವುದು ಇದು ಅನುಭ
ಗ್ರಾಹ್ಯವೂ, ಸಮರ್ಪಕವೂ ಆಗಿರುವುದಲ್ಲ
ಶ್ರುತಿ ಸ್ಮೃತಿಗಳ ಆಧಾರವನ್ನು ಹೊಂದಿದೆ.

ಇಡೀ ವಿಶ್ವವು ಪರಬ್ರಹ್ಮನ ಶರೀರವಾ
ಎಂಬುದು ಈ ದರ್ಶನದ ನಿಲುವು. ಈ ಶರೀ
ಶರೀರಿ ಭಾವನೆ ಅತ್ಯಂತ ಗಹನವಾದುದು. ಸಮ
ಚಿದಚಿದ್ವಸ್ತುಗಳು ಕರ್ಮ ಸಂಬಂಧದಿ
ಸಂಸಾರ ಚಕ್ರದಲ್ಲಿ ಸಿಕ್ಕಿವೆಯಾದರೂ, ಸ
ನಿಯಾಮಕನಾದ ಪರಬ್ರಹ್ಮನ ಇಚ್ಛೆಗೆ ಅನುಗು
ವಾಗಿ ಮೋಕ್ಷ ಪಡೆಯಲು ಅರ್ಹವಾಗಿವೆ. ಇಂ
ಮೋಕ್ಷ ಸಾಧನೆಗೆ ಪ್ರಪತ್ತಿವಿದ್ಯೆ ಆಗು
ಜ್ಞಾನಯೋಗ, ಕರ್ಮಯೋಗ, ಭಕ್ತಿಯೋಗಗ
ಮೋಕ್ಷಕ್ಕೆ ಸಾಧನವಾಗಿದ್ದರೂ, ಪ್ರಪತ್ತಿಯೋಗ
ಸಮಸ್ತರಿಗೂ ಅನ್ವಯಿಸಬಹುದಾದ ಸುಲ
ಮಾರ್ಗ ಎಂದು ಪ್ರತಿಪಾದಿತವಾಗಿದೆ. ಪ
ಬ್ರಹ್ಮನು ಎಲ್ಲರ ಉದ್ಧಾರಕನು, ರಕ್ಷಕನು–ಎಂ
ದೃಢ ವಿಶ್ವಾಸವೇ ಪ್ರಪತ್ತಿಯೋಗದ ವೈಶಿಷ್ಟ
ಈ ಮಹಾ ವಿಶ್ವಾಸದಿಂದ ಜೀವನು ತನ್ನ ರಕ್ಷಣೆ
ಭಾರವನ್ನು ಪರಮಾತ್ಮನಲ್ಲಿ ಅರ್ಪಿಸುವುದೇ
ನ್ಯಾಸ. ಇದಕ್ಕೆ ಅಗತ್ಯವಾದ ಮಾನಸಿಕ ಪರಿಸ್ಥಿ
ಯನ್ನು ಗುರುಮುಖೇನ ಪಡೆದು ತಿಳಿಯಬೇ
ಪ್ರಪತ್ತಿ ವಿದ್ಯೆಯು ಇಡೀ ವಿಶ್ವಕ್ಕೆ ಅನ್ವಯಿ
ವುದು. ಈ ದೃಷ್ಟಿಯಿಂದ ಇದನ್ನು ವಿಶ್ವಧ
ಎಂದು ವ್ಯವಹರಿಸಬಹುದು. ಆದರೆ ಇದರ ಉ
ಯೋಗವನ್ನು ಹೊಂದುವ ಹೊಣೆಗಾರಿಕೆ ಜೀ
ತ್ಮನಿಗೆ ಸೇರಿದ್ದು.

ಉಪನಿಷತ್ತುಗಳಲ್ಲಿ ಪ್ರಪತ್ತಿ ನಿರೂಪಣೆ ಬ
ಚೆನ್ನಾಗಿದೆ. ಮುಕ್ತಿಗೆ ಪ್ರಪತ್ತಿಯೇ ಮು
ಮಾರ್ಗ ಎಂದು ಈಶಾವಾಸ್ಯ ತಿಳಿಸುತ್ತ
(ಭೂಯಿಷ್ಠಾಂತೇ ನಮ ಉಕ್ತಿಂ ವಿಧೇಮ) ನ
ಉಕ್ತಿ ಎಂದರೆ ಶರಣಾಗತಿ ಅಥವ ಪ್ರಪ
ಶ್ವೇತಾಶ್ವತರ ಉಪನಿಷತ್ತು, ಮಾನವನು ಮೋ
ಪಡೆಯಬೇಕಾದರೆ ಶರಣಾಗತಿಗಿಂತ ಬೆ
ಉಪಾಯವಿಲ್ಲ ಎಂದು ಹೇಳಿದೆ. (ಮುಮುಕ್ಷುರ್ವೈ
ಶರಣ ಮಹಂ ಪ್ರಪದ್ಯೇ) ಬಹುಪ್ರಾಚೀನವಾ
ಛಾಂದೋಗ್ಯ ಉಪನಿಷತ್ತು ಬ್ರಹ್ಮನ ಹ
ಯಾರು ಶಾಶ್ವತವಾಗಿರಬೇಕೆಂದು ಅಪೇಕ್ಷಿ
ವನೋ ಅವನು ಶರಣಾಗತಿ ಮಾಡಬೇಕು–ಎಂ
ವ್ಯಕ್ತಪಡಿಸಿದೆ. (ಬ್ರಹ್ಮ ಸಂಸ್ಥೋ ಅಮೃತ
ಮೇತಿ) ಬ್ರಹ್ಮ ಸಂಸ್ಥ ಎಂದರೆ ಬ್ರಹ್ಮನ ಹ
ಇರಬೇಕೆಂದು ಇಷ್ಟಪಡುವವನು. ಹಾಗೆಯೆ
ಮುಂಡಕ, ಮಹಾನಾರಾಯಣ ಉಪನಿಷ
ಗಳು ನ್ಯಾಸ ವಿದ್ಯೆ (ಪ್ರಪತ್ತಿ) ಗಿಂತ ಉತ್ತ
ವಾದುದು ಇನ್ನೊಂದಿಲ್ಲ ಎಂದು ತಿಳಿಸಿವೆ.

(35 ನೇ ಪುಟ ನೋ

# ಶುಭದ ಸಂಕೇತ - ಸ್ವಸ್ತಿಕ

ಸ್ವಸ್ತಿನ ಇಂದ್ರೋ ವೃದ್ಧಶ್ರವಾಃ
ಸ್ವಸ್ತಿನಃ ಪೂಷಾ ವಿಶ್ವವೇದಾಃ
ಸ್ವಸ್ತಿನ ಸ್ತಾರ್ಕ್ಷ್ಯೋ ಅರಿಷ್ಟನೇಮಿಃ
ಸ್ವಸ್ತಿನೋ ಬೃಹಸ್ಪತಿರ್ದಧಾತು‌ಃ

ಈ ಮಂತ್ರವನ್ನು ಭಾರತೀಯನು ಪ್ರತಿಯೊಂದು ಶುಭಕಾರ್ಯದಲ್ಲಿ ಪಠಿಸುವುದುಂಟು. ಶ್ಲೋಕದ ಪ್ರತಿ ಚರಣದಲ್ಲಿಯೂ ಸ್ವಸ್ತಿ ಎಂಬ ಪದವಿದೆ. ಇದು ಸು–ಅಸ ಎಂಬ ಧಾತುವಿನಿಂದ ಹುಟ್ಟಿದುದು. ಸು ಎಂದರೆ ಒಳ್ಳೆಯದು ಎಂದರ್ಥ. ಇಲ್ಲವೆ ಮಂಗಲ ಅಥವಾ ಕಲ್ಯಾಣವೆಂದೂ ಅರ್ಥೈಸಬಹುದು. ಇದರ ಮುಂದಿನ ಭಾಗವಾದ ಅಸ ಎಂದರೆ ಇರುವಿಕೆ. ಇಲ್ಲವೆ ಅಸ್ತಿತ್ವ ಎಂದೆನಿಸುವುದು. ಸ್ವಸ್ತಿ ಎಂದರೆ ಕಲ್ಯಾಣ ಎಂದಾಗುವುದು. ನಮ್ಮ ಪ್ರಾಚೀನ ದ್ರಷ್ಟಾರರಾದ ಋಷಿ ಮುನಿಗಳು ತಮ್ಮ ಕಲ್ಯಾಣವನ್ನು ಕುರಿತು ದೇವತೆಗಳಲ್ಲಿ ಮಾಡಿಕೊಂಡ ಪ್ರಾರ್ಥನಾಮಂತ್ರವೇ ಇದಾಗಿರುವುದು. "ಹೇ ಪೂಜ್ಯನಾದ ಮಹನೀಯನಾದ ಇಂದ್ರನೇ! ನಮಗೆಲ್ಲ ಕಲ್ಯಾಣಕಾರಕನಾಗು, ವಿಶ್ವಜ್ಞಾನಿಯಾದ ಪೂಷಾ, ನಮಗೆ ಕಲ್ಯಾಣವನ್ನು ಮಾಡು. ಅರಿಷ್ಟನೇಮಿಯಾದ ತಾರ್ಕ್ಷ್ಯನು ನಮಗೆ ಮಂಗಳವನ್ನುಂಟುಮಾಡಲಿ. ನಮಗೆಲ್ಲ ಬೃಹಸ್ಪತಿಯು ಕಲ್ಯಾಣವನ್ನುಂಟು ಮಾಡಲಿ".

ಪ್ರತಿಯೊಬ್ಬರೂ ತಮಗೆ ಕಲ್ಯಾಣವಾಗಲಿ; ಸುಖವಾಗಲಿ ಎಂದು ಆಶಿಸುಸುವುದು ಸಹಜ. ಈ ಸ್ವಸ್ತಿ ಶಬ್ದದ ಇನ್ನೊಂದು ರೂಪವನ್ನೇ ನಾವು ಸ್ವಸ್ತಿಕ ಚಿಹ್ನೆಯಾಗಿ ಬಿಡಿಸುವುದುಂಟು. ರೇಖಾ ಚಿತ್ರದಲ್ಲಿ ಈ ತತ್ತ್ವವನ್ನಳವಡಿಸಿಕೊಂಡಿರುವುದು ಬಹು ಅಚ್ಚರಿಯನ್ನುಂಟು ಮಾಡುವುದು. ಅಂತಃಕರಣ ರೂಪದಲ್ಲಿರುವ ಇದನ್ನು ಶತದಳ ಕಮಲವೆಂದೂ ಹೇಳುವುದುಂಟು. ಯಾವ ಸ್ಥಳದಲ್ಲಿ ಆನಂದ, ಉಲ್ಲಾಸ, ಶುಭ್ರತೆಗಳಿವೆಯೋ ಆ ಸ್ಥಳದಲ್ಲೆಲ್ಲ ನಾವು ಈ ಸ್ವಸ್ತಿಕ ಚಿಹ್ನೆಯನ್ನು ಕಾಣುತ್ತೇವೆ. ಇದು ಹೃದ್ಗತವಾದ ಅವ್ಯಕ್ತರೂಪದ ಪ್ರತೀತವೆಂದೂ ಹೇಳಿದ್ದಾರೆ. ಬಹು ಪ್ರಾಚೀನ ಕಾಲದಿಂದಲೂ ಮಾನವನು ತನ್ನ ಉದ್ಧಾರಕ್ಕಾಗಿ ಈ ಚಿಹ್ನೆಯನ್ನು ಬಳಸಿಕೊಂಡು ಬಂದಿದ್ದಾನೆ. ಮಳೆಯನ್ನು ದಯಪಾಲಿಸುವ ಇಂದ್ರ, ಮೇಘಗಳನ್ನು ಸಂಚರಿಸುವಂತೆ ಮಾಡುವ ವಾಯು, ಪ್ರಕಾಶವನ್ನೀಯುವ ಸೂರ್ಯ, ಮಾನವನ ಒಳಿತು ಕೆಡಕುಗಳ ಮೇಲೆ ಸದಾ ತನ್ನ ದೃಷ್ಟಿಯನ್ನು ಹರಿಸುವ ಧರಿತ್ರಿ– ಹೀಗೆ ನಾನಾರೂಪದಲ್ಲಿ ದೇವತೆಗಳು ಈ ಚಿಹ್ನೆಯಲ್ಲಿ ವಾಸವಾಗಿದ್ದಾರೆ. ದೇವತೆಗಳ ಶಕ್ತಿ ಹಾಗೂ ಮಾನವನ ಶುಭಾಕಾಂಕ್ಷೆಗಳ ಸಂಗಮವನ್ನೇ ನಾವು ಈ ಚಿತ್ರದಲ್ಲಿ ಕಾಣಬಹುದಾಗಿದೆ.

ನೇರವಾಗಿ ಒಂದು ರೇಖೆಯನ್ನೆಳೆದು ಅದರ ಮಧ್ಯದಲ್ಲಿ ಅಷ್ಟೇ ಸಮಾನಾಂತರದಲ್ಲಿ ಒಂದು ಅಡ್ಡಗೆರೆಯನ್ನೆಳೆದರೆ ಸಾಕು ಅದು ಸ್ವಾಸ್ತಿಕದ ಮೂಲರೂಪವೆನಿಸುತ್ತದೆ. ಮುಂದೆ ಈ ರೇಖೆಯು ನಾನಾರೂಪದಲ್ಲಿ ಕಮಲದಳದಂತೆ ವಿಕಾಸವಾಗುತ್ತ ಹೋಗುತ್ತದೆ. ಇಲ್ಲಿ ಮೊದಲು ನೇರವಾಗಿ ಅಥವಾ ಉದ್ದದಲ್ಲಿ ಬಿಡಿಸಲಾದ ರೇಖೆಯು ಜ್ಯೋತಿರ್ಲಿಂಗದ ಪ್ರತೀಕವೆನ್ನುತ್ತಾರೆ. ಇದು ವಿಶ್ವೋತ್ಪತ್ತಿಯ ಚಿಹ್ನೆ ಎಂದು ಭಾವಿಸಲಾಗುತ್ತದೆ. ಮಧ್ಯದಲ್ಲಿ ಕೊರೆಯಲಾದ ರೇಖೆಯು ವಿಶ್ವದ ವಿಸ್ತಾರವನ್ನು ಸೂಚಿಸುತ್ತದೆ. ಬ್ರಹ್ಮನಿಂದ ಸೃಷ್ಟಿಸಲ್ಪಟ್ಟುದನ್ನು ಎಲ್ಲ ದೇವತೆಗಳೂ ರಕ್ಷಿಸಿಕೊಂಡು ಬರುತ್ತಾರೆ ಎಂಬುದನ್ನು ತಿಳಿಸುವುದೇ ಸ್ವಸ್ತಿಕ ಚಿಹ್ನದ ಮೂಲವಿಷಯವಾಗಿದೆ. ಇದಲ್ಲದೆ ಇನ್ನೂ ಅನೇಕ ವೇದಾಂತದ ವಿವರಗಳನ್ನೊದಗಿಸುವುದೂ ಉಂಟು.

ಏಸು ಕ್ರಿಸ್ತನನ್ನು ಚಿತ್ರಿಸಿದ ಶಿಲುಬೆಯೂ ಕೂಡ ಇದೇ ಚಿಹ್ನೆಯಿಂದ ಕೂಡಿದುದಾಗಿದೆ ಎಂದು ಕೆಲವರ ಮತವಿದೆ. ಇದು ಕೇವಲ ಕ್ರೈಸ್ತರಲ್ಲಿ ಮಾತ್ರ ಪೂಜನೀಯ ಎಂದೇನಲ್ಲ ವಿಶ್ವದ ಅನೇಕ ಭಾಗಗಳಲ್ಲಿ ಈ ಚಿಹ್ನೆಯನ್ನು ಒಂದಿಲ್ಲೊಂದು ಕಾರಣಗಳಿಂದ ಪೂಜಿಸುವ ಸಂಪ್ರದಾಯವಿದೆ ಮಿಸ್ರದೇಶದ ಸಂಸ್ಕೃತಿಯು ಬಹು ಪ್ರಾಚೀನ ಕಾಲದ್ದೆಂದು ಗುರುತಿಸಲಾಗುತ್ತದೆ. ಅಲ್ಲಿ ಆಯಸಿಸ್ ಎಂಬ ಹೆಸರಿನ ದೇವತೆಯೊಂದಿದೆ. ವೈದಿಕ ಸಂಪ್ರದಾಯದ ಅದಿತಿಯಂತೆ ಆ ದೇವತೆಯ ಸ್ಥಾನಮಾನಗಳಿವೆ. ಇದಕ್ಕೆ ವಿವರವಾಗಿ ಹೇಳಬೇಕಾದಲ್ಲಿ ಸಿಂಧೂ ಸಂಸ್ಕೃತಿಯ ಮಹಾಯೋಗದಂತೆ ಆ ದೇವತೆಯನ್ನು ಅಲ್ಲಿಯ ಜನರು ಪೂಜಿಸುತ್ತಾರೆ. ಅವಳು ಹಸುವಿನ ಕೊಂಬುಗಳನ್ನು ಕಿರೀಟದ ರೂಪದಲ್ಲಿ ತಲೆಯಮೇಲೆ ಧರಿಸಿರುತ್ತಾಳೆ. ಅವಳ ಎಡಗೈಯಲ್ಲಿ ಯಷ್ಟಿ, ಬಲಗೈಯಲ್ಲಿ ತ್ರಾಸು ಧರಿಸಿದ್ದಾಳೆ. ಇದನ್ನೇ ನಾವು ಅಸುರ ಸಂಸ್ಕೃತಿ ಎಂದೆನ್ನುತ್ತೇವೆ ಆದರೂ ಈ ಜನ ನಮ್ಮಂತೆ ಸ್ವಾಸ್ತಿಕ ಚಿಹ್ನೆವನ್ನು ಬಳಸಿರುವುದು ಅಭ್ಯಾಸ ಯೋಗ್ಯವಾದುದು ಎಂದೆನಿಸುತ್ತದೆ.

ಬ್ರಿಟಿಷ ಗ್ಯಾಲರಿಯಲ್ಲಿ ಅಸ್ಸೀರಿಯನ್ ಗ್ಯಾಲರಿ ಎಂಬ ಹೆಸರಿನ ವಿಭಾಗವಿದೆ. ಆ ಭಾಗದಲ್ಲಿ ಸಸ್ಸಿರಾಮ್ಮಾನು ಎಂಬ ಹೆಸರಿನ ಶಿಲಾವಿಗ್ರಹವಿಟ್ಟಿದ್ದಾರೆ. ಆ ವಿಗ್ರಹದ ವಕ್ಷಸ್ಥಳದಲ್ಲಿ ಅಧಿಕ ಚಿಹ್ನೆವನ್ನು ಬಿಡಿಸಲಾಗಿದೆ ರೋಮನ್ ಕ್ಯಾಥಲಿಕ್ ಕೋಶದಲ್ಲಿ ಈ ಚಿಹ್ನೆಯನ್ನು ಪೈಕ್ರೋರಲ್ ಕ್ರಾಸ್ ಎಂಬ ಹೆಸರಿನಿಂದ ಕರೆಯಲಾಗಿದೆ. ಕ್ರಾಸ್‌ಗಳಲ್ಲಿ ಎರಡುವಿಧ. ಮೊದಲನೆಯದು ಸಮಾನಾಂತರ ರೇಖೆಯ ಕ್ರಾಸ. ಅದನ್ನು ನಾವು ಅಧಿಕ ಚಿಹ್ನೆಯಂತೆ ಬೆಳೆಸುತ್ತೇವೆ. ಇನ್ನೊಂದು ಕ್ರಾಸ್‌ಗೆ ಮಧ್ಯದ ರೇಖೆ ಸ್ವಲ್ಪ ಲಂಬಾಕಾರ. ಹೀಗೆ ಉದ್ದವಾಗಿದ್ದ ಕ್ರಾಸನ್ನು ಸಂತ ಅಂಡ್ರ್ಯೂಜ ಕ್ರಾಸ್ ಎಂಬ ಹೆಸರಿನಿಂದ ಕರೆಯುತ್ತಾರೆ. ಇದೂ ಕೂಡ ಭಾರತದ ಸ್ವಸ್ತಿಕ ಚಿಹ್ನೆಯನ್ನೇ ಪ್ರತಿಪಾದಿಸುತ್ತದೆ.

# ಸಪ್ತಗಿರಿ

**ಬರಹಗಾರರಿಗೆ ಸೂಚನೆ:**

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಅಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸ ಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ.

ಭಾರತೀಯರು ಈ ಚಿಹ್ನೆಯನ್ನು ಸೂರ್ಯನಾರಾಯಣನಿಗೆ ಹೋಲಿಸುತ್ತಾರೆ. ಈ ಚಿಹ್ನೆಯ ನಾಲ್ಕು ತುದಿಗಳನ್ನು ಕೋನಾಕೃತಿಯ ರೂಪದಲ್ಲಿ ಒಂದುಗೂಡಿಸಿದರೆ ಅದು ವರ್ತುಲವಾಗಿ ಪರಿವರ್ತನೆಗೊಳ್ಳುವುದು ಮುಂದೆ ಅದನ್ನು ಎಂಟು ಕೋನಾಕಾರದಲ್ಲಿ ಬಿಡಿಸುತ್ತಾರೆ. ಆಗ ಅದು ವಿಷ್ಣುವಿನ ಕೈಯಲ್ಲಿರುವ ಶ್ರೀಚಕ್ರವಾಗಿ ತೋರಿಬರುತ್ತದೆ. ಈ ಚಿಹ್ನೆಯ ನಾಲ್ಕು ತುದಿಗಳೆಂದರೇನೇ ವಿಷ್ಣುವಿನ ನಾಲ್ಕು ಭುಜ. ಅದರ ಮಧ್ಯಬಿಂದುವೇ ನಾರಾಯಣನ ನಾಭಿ ಕಮಲ. ಈ ಕಮಲದಿಂದಲೇ ಸೃಷ್ಟಿಕರ್ತನಾದ ಬ್ರಹ್ಮನು ಹುಟ್ಟಿದ. ಆದುದರಿಂದ ಸ್ವಾಸ್ತಿಕ ಚಿಹ್ನೆಯು ಸೃಜನಾತ್ಮಕ ಚಿಹ್ನೆ. ಈ ಚಿಹ್ನೆಯಲ್ಲಿಯ ಎರಡು ತುದಿಗಳನ್ನು ಮೇಲೆ ಮಾಡಿದಲ್ಲಿ ಅದು ತ್ರಿಶೂಲವಾಗಿ ಮಾರ್ಪಡುತ್ತದೆ. ಆಗ ಅದು ಶಿವನ ಆಯುಧವಾಗಿ ಪರಿವರ್ತನಗೊಳ್ಳುವುದುಂಟು.

ಸ್ವಸ್ತಿಕ ಚಿಹ್ನೆಯು ಸೃಷ್ಟಿ, ಸ್ಥಿತಿ, ಲಯಗಳ ತತ್ತ್ವವನ್ನು ಎತ್ತಿ ತೋರಿಸುವ ಸಾಂಕೇತಿಕ ಚಿತ್ರವೆನಿಸುತ್ತದೆ. ಸೂರ್ಯನ ಕಿರಣಗಳಿಂದ ಶ್ರೀಚಕ್ರ ಹಾಗೂ ತ್ರಿಶೂಲಗಳ ಉತ್ಪತ್ತಿಯಾಯಿತೆಂಬ ಮಾತನ್ನು ಭವಿಷ್ಯ ಪುರಾಣವು ಹೇಳುತ್ತದೆ. ದೇವತೆಗಳಿಗಾಗಿ ನಿರ್ಮಿಸಲಾದ ಆಸನದಲ್ಲಿ ಈ ಚಿಹ್ನೆಯನ್ನು ಬಳಸಿರುವುದುಂಟು. ಇದನ್ನು ಗಣಪತಿಯ ಪ್ರತೀಕವೆಂದೂ ಕೆಲವರು ಭಾವಿಸುತ್ತಾರೆ. ಗಣಪತಿಯನ್ನು ಕುರಿತು ಸ್ತೋತ್ರಮಾಡುವಾಗ 'ತ್ವಂ ವಿಷ್ಣುಂ ತ್ವಂ' ಸೂರ್ಯಂ, ಎಂದು ಸಂಬೋಧಿಸಿರುವುದುಂಟು. ಪೂರ್ವದಿಗಂತದಲ್ಲಿ ಕಾಣುವ ಆ ರಕ್ತಯುಕ್ತ ಆಕಾಶಮಂಡಲವೇ ಗಜಮುಖ ಎಂದು ಇವರ ಭಾವನೆ. ಲಕ್ಷಾಂತರ ಕೋಶದವರೆಗೆ ಹರಿವ ಕಿರಣಗಳೇ ಆತನ ಸೊಂಡಿಲು ಎಂದು ನಂಬಿಕೆ. ಅಥರ್ವಣದಲ್ಲಿ ನಿನ್ನಿಂದಲೇ ಈ ವಿಶ್ವವು ಹುಟ್ಟಿತೆಂದು ವರ್ಣಿಸಲಾಗಿದೆ.

ಸ್ವಸ್ತಿಕ ಚಿಹ್ನೆಯನ್ನು ಕುರಿತು ವೈದಿಕರಲ್ಲಿ ಬೇರೊಂದು ಅಭಿಪ್ರಾಯವೂ ಇದೆ. ಅವರು ಕಾಲ ಹಾಗೂ ದೇಶ ಎಂಬ ಇಬ್ಬರು ಯಕ್ಷರಿಂದ್ದು ಅವರು ಒಂದುಗೂಡಿ
ಪ್ರತೀಕವೇ ಈ ಚಿಹ್ನೆಯೆಂದು ಹೇಳುತ್ತಾ
ಎರಡು ಜೀವಿಗಳು ಒಂದಾದಾಗ ಮಾ
ಮುಂದಿನ ಪ್ರಜಾಭಿವೃದ್ಧಿಗೆ ದಾರಿಯಲ್ಲ
ಸ್ವಸ್ತಿಕವು ಸಂತಾನೋತ್ಪತ್ತಿಯ ಚಿಹ್ನೆಯ
ಆಹುದು. ಕೆಲವರು ನವಜಾತ ಶಿಶುವನ
ಹೊಸದಾಗಿರುವ ಬಟ್ಟೆಯಮೇಲೆ ಸ್ವಸ್ತಿ
ಚಿಹ್ನೆ ಬಿಡಿಸಿ ಅದರ ಮೇಲೆ ಮಲಗಿಸು
ದುಂಟು. ಆ ಮಗುವಿನ ಜೀವನ ಕಲ್ಯಾ
ಕಾರಕವಾಗಲಿ ಎಂಬ ಅಪೇಕ್ಷೆಯೇ
ಆಚರಣೆಗೆ ಕಾರಣ. ಯಾರು ಚಾತುರ್ಮಾ
ಕಾಲದಲ್ಲಿ ಪ್ರತಿದಿನ ಈ ಚಿತ್ರವನ್ನು ರ
ವಳ್ಳಿಯಲ್ಲಿ ಬಿಡಿಸುವರೋ ಅಂಥ
ಸಂಸಾರವು ಸುಖದಾಯಕವಾಗಿ ಪರಿ
ಮಿಸುವುದೆಂಬ ನಂಬಿಕೆ ಇದೆ. ಅಂಥವ
ವೈಧವ್ಯಬಾರದು ಎಂದು ಪದ್ಮಪುರಾಣ
ಹೇಳಿಕೆ ಇದೆ.

ಹಿಂದುಗಳಂತೆ ಬೌದ್ಧರು, ಜೈನ
ಕೂಡ ಈ ಸ್ವಸ್ತಿಕ ಚಿಹ್ನೆಯನ್ನು ಆ
ದಿಂದ ಪೂಜಿಸುತ್ತಾರೆ. ಈ ಸ್ವಸ್ತಿ
ದಿಂದಲೇ ಎಲೆ ಹೂಗಳು ಬೆಳೆದುಕೊಂ
ವೆಂದು ಬೌದ್ಧರು ಹೇಳುತ್ತಾರೆ. ಅನೇ
ಬಗೆಯಿಂದ ಬೌದ್ಧರು ಸ್ವಸ್ತಿಕದ ಚಿ
ಯನ್ನು ಪೂಜಿಸುವುದುಂಟು. ಇವರ ಪ್ರಭಾ
ದಿಂದಾಗಿ ಈ ಚಿಹ್ನೆಯು ಮಲಯಾ, ಜಾವ
ಸುಮಾತ್ರ ಹಾಗೂ ಚೀನದವರೆಗೂ ವ್ಯಾಪಿ
ಕೊಳ್ಳುವಂತಾಗಿದೆ. ಚೀನದ ಅನೇಕ ದೇ
ಮಂದಿರಗಳಲ್ಲಿ ಹಾಗೂ ಪ್ರಾಚೀನ ಗ್ರಂ
ಗಳಲ್ಲಿ ಈ ಗುರುತನ್ನು ನಾವು ಕಾಣಬ
ದಾಗಿದೆ

ಭಾರತೀಯರಾದ ನಾವು ಶಿಲ್ಪಶಾಸ
ದಲ್ಲಿಯೂ ಸಹ ಈ ಚಿಹ್ನೆಯಂತೆಯೇ ಅನೇ
ದೇವ ಮಂದಿರಗಳನ್ನು ರಚಿಸಿದ್ದೇವೆ.
ಚಿಹ್ನೆಯು ಶಾಂತಿಯ ಪ್ರತೀಕವಾಗಿ
ವಿಕಾಸದ ಪ್ರತೀಕವಾಗಿದೆ. ಯೋಗ ಪ್ರತೀ
ವಾಗಿದೆ. ಶುಭ ಪ್ರತೀಕವಾಗಿದೆ. ಎಂ
ದನ್ನು ತಿಳಿದು ನಡೆಯುವುದರಲ್ಲಿಯೇ ನವ
ಸಂಸ್ಕೃತಿಯ ಮೂಲವು ಅಡಕವಾಗಿದೆ.

★

# ಜೈಮಿನಿ ಭಾರತದಲ್ಲಿ ಚಂದ್ರಹಾಸನ ಕಥೆ

ಭಾಗವತ ಹಿನ್ನೆಲೆಯಲ್ಲಿ ರಚಿತವಾದ ಕನ್ನಡ ಕೃತಿಗಳಲ್ಲಿ ಜೈಮಿನಿಭಾರತ ಬಹಳ ಹೆಸರುವಾಸಿಯಾಗಿದೆ. ಈ ಕೃತಿಯ ಕಥಾವಸ್ತು ನೆಪಕ್ಕೆ ಅಶ್ವಮೇಧಯಾಗದ ಕಥೆ. ಆದರೆ ಲಕ್ಷ್ಮೀಶನ ಪರಮಗುರಿ ಕೃಷ್ಣ ಪಾರಮ್ಯ ಹಾಗೂ ಕೃಷ್ಣ ಭಕ್ತರ ಮಹಾತ್ಮೆಯನ್ನು ಚಿತ್ರಿಸುವುದು. ಕಥೆಯ ಉದ್ದಕ್ಕೂ ಬರುವ ವೀರರು, ಶ್ರೇಷ್ಠರು ಎಲ್ಲರೂ ಕೃಷ್ಣ ಭಕ್ತರೇ. ಒಂದಲ್ಲ ಒಂದು ವಿಧದಲ್ಲಿ ಕೃಷ್ಣನಿಂದ ಉದ್ಧಾರವಾಗುವವರು. ಈ ಅರ್ಥದಲ್ಲಿ ಕವಿ ಹೇಳುವಂತೆ ಜೈಮಿನಿಭಾರತ "ಕೃಷ್ಣ ಚರಿತಾಮೃತ"ವೇ ಸರಿ. ಹರಿಯ ಬಲವು ಒಂದಿದ್ದರೆ ವಿಷವೂ ಅಮೃತವಾಗುತ್ತದೆಂಬ ಧೋರಣೆಯನ್ನು ಹೊಂದಿರುವ ಲಕ್ಷ್ಮೀಶ, ವಿಷ್ಣುವಿನ ಹಾಗೂ ವಿಷ್ಣು ಭಕ್ತಿಯ ಮಹಿಮೆಯನ್ನು ಹೇಗೆ ಚಿತ್ರಿಸುತ್ತಾನೆಂಬುದಕ್ಕೆ ಜೈಮಿನಿ ಭಾರತದಲ್ಲಿಯೇ ಅತ್ಯಂತ ಹೃದಯಸ್ಪರ್ಶಿಯಾಗಿ ಚಿತ್ರಿತವಾಗಿರುವ ಚಂದ್ರಹಾಸನ ಕಥೆಯನ್ನು ನೋಡಬಹುದು.

ಕೇರಳದ ರಾಜ ಮೇಧಾವಿ. ಅವನ ಮಗ ಚಂದ್ರಹಾಸ. ಹುಟ್ಟುತ್ತಲೇ ಇವನ ಎಡಗಾಲಿನಲ್ಲಿ ಆರು ಬೆರಳುಗಳಿದ್ದುವಂತೆ. ಈತನದು ಮೂಲಾನಕ್ಷತ್ರ. ಫಲವಾಗಿ ಯುದ್ಧರಂಗದಲ್ಲಿ ತಂದೆ ಮಡಿದ, ಪತಿಯ ಸಾವಿಂದ ದುಃಖಿತಳಾದ ಚಂದ್ರಹಾಸನ ತಾಯಿಯೂ ಅಗ್ನಿಪ್ರವೇಶಮಾಡಿದಳು. ಇದರ ಪರಿಣಾಮ ರಾಜಕುವರ ತಬ್ಬಲಿಯಾದ. ಚಂದ್ರಹಾಸನದೋ ಸೊಗಸಾದ ರೂಪ.

ಮೊಳೆವಲ್ಲುಗುವ ಜೊಲ್ಲು ದಟ್ಟಡಿ ತೊದಲ್ವನುಡಿ
ತೊಳತೊಳಗುತಿಹ ಸೊಬಗು, ಮೆರೆವ ನಗೆ
ಮೊಗದ ಬಗೆ
ಪೊಳೆವ ಕಣ್ಮಸುಪ ನುಣ್ಗದಪಿಗೆಣೆ ಚೆಲ್ವಪಣೆ
ಕುರುಳ ದೋಲ್ವಂದೆಗಾಲು
ಸುಳಿನಾಭಿ ಮಿಗೆಶೋಭಿಪಧರದೆಡೆ ಬಟ್ಟದೊಡೆ
ನಳಿತೋಳಡಿದ ಧೂಳಿ, ಸೊಗಯಿಸುವ ವರ
ಶಿಶುವ
ನಲಿದಾಡಿಸುವ ರೂಢಿಯಿಲ್ಲೆಂದು ನೆರೆನೊಂದು
ಮರುಗುವಳಜಶ್ರವಾಳು

ತಬ್ಬಲಿಯಾದ ಈ ಸುಂದರ ಶಿಶುವನ್ನು ದಾದಿಯೊಬ್ಬಳು ಕುಂತಳ ನಗರಕ್ಕೆ ಕರೆತಂದು ಅತಿ ಪ್ರೀತಿಯಿಂದ ಸಾಕುತ್ತಿದ್ದಳು. ದುರದೃಷ್ಟವಶಾತ್, ರೋಗಪೀಡಿತಳಾಗಿದ್ದ ಆಕೆಯೂ ಒಂದುದಿನ ಕಾಲವಶಳಾದಳು. ಈಗ ಮಗು ಚಂದ್ರಹಾಸ ಪರದೇಶಿಯಾದ, ಬೀದಿಬೀದಿಯಲ್ಲಿ ಅಲೆಯುತ್ತ ಕಂಡ ಕಂಡ ಹೆಂಗಸರ ಕರುಣೆಯ ಕೂಸಾಗಿ ಬೆಳೆಯುತ್ತಿದ್ದ.

ಹೀಗಿರುವಾಗ ಒಂದು ದಿನ ಗೆಳೆಯರೊಂದಿಗೆ ಆಡುತ್ತಿದ್ದ ಈ ಮುದ್ದು ಬಾಲಕನಿಗೆ ಸಾಲಗ್ರಾಮಶಿಲೆಯೊಂದು ಕಣ್ಣಿಗೆ ಬಿದ್ದಿತು. ಒಡನೆ ಅದನ್ನು ತೆಗೆದುಕೊಂಡು ಗೆಳೆಯರಿಗೆ ತೋರಿ "ಬಟ್ಟೆಗಲ್ಲಿಂತು ವರ್ತುಳದಿಂದೆ ಚೆಲ್ವಾಗಿ ಪುಟ್ಟುವುದೆ ಪೊಸತೆಂದು" ತೋರಿ ಅದರೊಂದಿಗೆ ಆಟವಾಡುತ್ತ, ಮನೆಯಿಲ್ಲದವನಾದ್ದರಿಂದ ಆ ಶಿಲೆಯನ್ನು ಸದಾಕಾಲ ಬಾಯಲ್ಲೇ ಇಟ್ಟುಕೊಂಡಿದ್ದ. ಈ ಸಾಲಗ್ರಾಮದ ದೆಸೆಯಿಂದ ಚಂದ್ರಹಾಸ ಬದುಕಿನ ಪ್ರತಿಕ್ಷಣದಲ್ಲೂ ಜಯಗಳಿಸುತ್ತಿದ್ದ.

ಕುಂತಳ ದೇಶದ ಮಂತ್ರಿ ದುಷ್ಟಬುದ್ಧಿ ವಿಪ್ರರಿಗಾಗಿ ಒಂದು ದಿನ ಅನ್ನಸಂತರ್ಪಣೆಯನ್ನು ಏರ್ಪಡಿಸಿದ. ಆ ವಿಪ್ರರು, ಅಲ್ಲೇ ಗೆಳೆಯರೊಂದಿಗೆ ಆಡುತ್ತಿದ್ದ ಬಾಲಕನ "ಸಲ್ಲಲಿತ ರಾಜಲಕ್ಷಣಕೆ" ಬೆರಗಾಗಿ, ಆ ಬಾಲಕ ಯಾರೆಂದು ದುಷ್ಟಬುದ್ಧಿಯನ್ನು ಕೇಳಿದರು. ಜೊತೆಗೆ "ಎಂದಿರ್ದೊಡಂ ಚಾರುಲಕ್ಷಣದೊಳೀ ಪೊಳಲ್ಗೀ ಕುಂತಳಾಧೀಶನಾಳ್ವನಮ್ಮೊಡವಿಗೊಡೆಯನಹನ್" ಎಂದು ಭವಿಷ್ಯ ಹೇಳಿ ಈ ಮಗುವನ್ನು ನೀನಿರಿಸಿ ಕೊಂಡು ರಕ್ಷಿಸೆಂದು ಹೇಳಿದರು. "ಕುಂತಳೇಂದ್ರನಿಗೆ ಸುತರಿಲ್ಲ, ರಾಜ್ಯ ಮೆನಗೇಕಾಧಿಪತ್ಯ ಮಾಗಿರ್ದಪುದು'' ಎಂಬ ದುರಾಸೆಯಲ್ಲಿದ್ದ ದುಷ್ಟಬುದ್ಧಿಗೆ ವಿಪ್ರರಮಾತನ್ನು ಕೇಳಿ ಸಿಡಿಲು ಬಡಿದಂತಾಯಿತು 'ವಿಪ್ರರನುಡಿ ತಪ್ಪದು' ಹೇಗಾದರೂ ಮಾಡಿ ಬೆಳೆಯುತ್ತಿರುವ ಈ ಕುಡಿಯನ್ನು ಮೊಳಕೆಯಲ್ಲೇ ಚಿವುಟಿಹಾಕಬೇಕೆಂದು ಯೋಚಿಸಿದ ದುಷ್ಟಬುದ್ಧಿಯ ಯೋಚನೆಯಿಂದ ಚಂದ್ರಹಾಸನಿಗೆ ಕಂಟಕಗಳ ಪರಂಪರೆಯೇ ಆರಂಭವಾಯಿತು. ಆದರೆ ಹರಿಕೃಪೆಯ ಮುಂದೆ ಯಾರೇನು ಮಾಡಬಲ್ಲರು!

ಚಂಡಾಲರನ್ನು ಕರೆಸಿ, "ಕಾನನಾಂತರದೊಳೀ ತರಳನಂ ಕೊಂದು, ನೀವೇನಾದೊಡಂ ಕುರುಪ ತಂದೆನಗೆ ತೋರ್ಪುದೆಂದು'' ದುಷ್ಟಬುದ್ಧಿ ಆಜ್ಞಾಪಿಸಿದ. ಕಾಳರಕ್ಕಸರು ಬಂದು ಚಂದ್ರಹಾಸನನ್ನು ಒಯ್ದ ದಾರುಣಚಿತ್ರವಿದು.

ಪಾತಕಿಗಳೊಡಲೊಳಿಹ ಪರಮಾತ್ಮನಂತೆ
ಯಮ
ದೂತರೆಳೆತಂದಜಾಮಿಳನಂತೆ ಕಾಕ ಸಂ
ಘಾತದೊಳ್ ಸಿಕ್ಕಿರ್ದ ಕೋಗಿಲೆಯ
ಮರಿಯಂತೆ ನಲುಗಿ ಕತ್ತಲೆಯೊಳಿರ್ದ
ಕೇತ ಮರೀಚಿ ಲಾಂಛನದಂತೆ ಬಹಳ ಕೋ
ಪಾತಿಶಯದೊಳಗಿಹ ವಿವೇಕದಂತಾಗ ಪಶು
ಘಾತಕಿಗಳೆತ್ತಿ ಕೊಂಡೊಯ್ತು ಬಾಲಕನಿರ್ದನ
ಪರೆಡೆಯೊಳಂಜುತಳುತೆ

ಭಯಪೀಡಿತನಾದ ಚಂದ್ರಹಾಸನಿಗೆ ಈ ಸಂದರ್ಭದಲ್ಲಿ ನೆನಪಿಗೆ ಬಂದುದು ಶ್ರೀಹರಿಯೇ

ಪೆಗಲೊಳೇರಿಸಿ ಬನಕೆ ಚಂಡಾಲರೊಯ್ಯುತಿರೆ
ಮಿಗೆಬೆದರಿ ಭಯದಿಂದೆ ಬಾಲಕಂ ಬಾಯೊಳಾ
ವಗಮಿರಿಸಿ ಕೊಂಡಿರ್ಪ ದಿವ್ಯ ಸಾಲಗ್ರಾಮದು
ಪಲದತಿ ಮಹಿಮೆಯಿಂದೆ
ಬಗೆದೋರಲಾಗ ಮುರಹರ ಕೃಷ್ಣ ಕಮಲಾಕ್ಷ
ಖಗರಾಜಗಮನ ಸಲಹೆಂದು ಚೀರಿದೊಡವನ
ಮೊಗನೋಡಿ ಕರುಣದಿಂ ಕಟುಕರೆದೆ ಕರಗಿದು
ದೆಂತೊ ಹರಿನಾಮದೇಳ್ಗೆ

ಕವಿಚೂತವನ ಚೈತ್ರನೆಂದು ಹೆಸರಾದ ಕನ್ನಡ ಕವಿ ಲಕ್ಷ್ಮೀಶ ದೇವನೂರಿನವ. ಬರೆದದ್ದು ಕನ್ನಡ ಜೈಮಿನೀ ಭಾರತ. ಸಂಸ್ಕೃತವನ್ನೇ ಹೆಚ್ಚು ಅನುಸರಿಸಿದ್ದರೂ ಅವನ ಕನ್ನಡದ ಬನಿ, ಕನ್ನಡದ ಸೊಗಸು ನಾದಮಯತೆ ಅಸ್ವಾದ್ಯಕವಾದದ್ದು. ನಾದಲೋಲ ಎಂದು ಕರೆದರು ಅವನನ್ನು. ವಿದ್ವತ್ಸಭಾನೀರೇರುಹಾಕರದೊಳು ಅವನ ವಾರ್ಧಕ ಷಟ್ಪದ ಝೇಂಕರಿಸುತ್ತದೆ. ಜೊತೆಗೇ ಆವ ದೇವಪುರದ ಲಕ್ಷ್ಮೀರಮಣನ ಕಡುಭಕ್ತ. ಕಾವ್ಯದ ಮೂಲಕ ಮೋಕ್ಷವನ್ನು ಸಾಧಿಸುವ ಪ್ರಯತ್ನ. ಅಂತಲ್ಲಿ ಚಂದ್ರಹಾಸನ ಕಥೆಗೆ ಕನ್ನಡದ ಮೆರುಗು ಬರುವುದರಲ್ಲಿ ಸಂದೇಹವೇನು! ಹರಿಭಕ್ತ ಕವಿ ಹರಿಭಕ್ತ ಜೀವನವನ್ನು ವಿವರಿಸುವುದರಿಂದ ಆಪ್ಯಾಯಮಾನವಾಗುತ್ತದೆ.

ಶ್ರೀಮತಿ ಎನ್. ಪುಷ್ಪ

ಹರಿಭಕ್ತ ಬಾಲಕನ ಮೊರೆಗೆ ಕಟುಕರ ಎದೆಯೇ ಕರಗಿತು. ಆ ಪಶುಘಾತಕಿಗಳು ದುಷ್ಟಬುದ್ಧಿಯನ್ನೆ ಬೈದರು. ಶಿಶುವಧೆಗಳ್ಳಿದರು. ಅರ್ಭಕನ ಎಡಗಾಲಲ್ಲಿದ್ದ ಆರನೆಯ ಬೆರಳನ್ನು ಕೊಯ್ದು, ಕುರುಹಾಗಿ ತಂದು ದುಷ್ಟಬುದ್ಧಿಗೆ ತೋರಿ, ನಂಬಿಸಿ, ಬಹುಮಾನ ಪಡೆದು ಹೊರಟು ಹೋದರು

'ಹರಿಯನ್ನು ಮೊರೆಹೊಕ್ಕ ಜೀವಿಗಳಿಗೆ ಎತ್ತಣದು ಬಾಧೆ' ಎಂಬುದು ಕವಿಯ ಉದ್ಗಾರ ಚಂದನಾವತಿಯ ಅರಸ ಕುಳಿಂದಕ ಬೇಟೆಗಾಗಿ ಆ ಕಾಡಿಗೆ ಬಂದು ಮುತ್ತಿಗೆ ಹಾಕಿದ ಹರಿಣ ಒಂದನ್ನು ಬೆಂಬತ್ತಿ ಬಂದ ಅವನು ಹರಿಯನ್ನು ನೆನೆದು ಅಳುತ್ತ ಕುಳಿತ್ತಿದ್ದ ಬಾಲಕನನ್ನು ಕಂಡ. ಆ ಬಾಲಕ ತಾಯ್ತಂದೆಗಳನೊಡಹುಟ್ಟಿದವರನ್ನು ನೆನೆಯದೆ, ಮುರಾರಿಯನ್ನು ನೆನೆಯುತ್ತಿದ್ದುದನ್ನು ನೋಡಿ ಅಚ್ಯುತನೇ ಈ ಮಗುವಿಗೆ ಒಡೆಯನಿರಬೇಕೆಂದು, ಆದ್ದರಿಂದಲೇ ಸಾಯದೆ ಕಾಡಿನಲ್ಲಿ ಉಳಿದಿದ್ದಾನೆ ಎಂದು ಭಾವಿಸಿದ'ಎಲ್ಲರ್ಗೆ ತನುಜರಂ ಕುಡುವವಂ ಕೃಪನ್ನೆಸಲೆ, ತನಗೆ ಮಕ್ಕಳಿಲ್ಲ ಈತನೆ ಸುತ' ಎಂದುಕೊಂಡ. ಅಲ್ಲದೆ "ಮೃಗಯಾ ವ್ಯಸನದಿಂದೆ ಕಾನನಕೆ ತಾಂ ಕೃಷ್ಣಮೃಗದ ಕೂಡೈದಿದೊಡೆ ದೊರಕೊಂಡನೀ ಕೃಷ್ಣಭಾವದ ರ್ಭಕಂ, ಪಾಪಕೆಳೆಸಿದೊಡಾಯ್ತು ಪುಣ್ಯಂ" ಎಂದು ಹರ್ಷದಿಂದ ಬಾಲಕನನ್ನು ಎತ್ತಿಕೊಂಡು ತನ್ನ ಊರಿಗೆ ಮರಳಿದ. ನಿರ್ಮಲ ಮುಖಾಂಬುಜದಿಂ ಶಶಾಂಕನಂ ಕಳಕಳಿಸಿ ನಗುವ ಆ ಬಾಲಕನಿಗೆ ಚಂದ್ರಹಾಸನೆಂದು ಹೆಸರಿಟ್ಟು ಕುಳಿಂದಕನ ಬೆಳೆಸಿದ. ಬದುಕಿಗೆ ನವಜೀವನವನ್ನಿತ್ತ ಚಂದ್ರಹಾಸ ದಿನೇ ದಿನೇ ಬೆಳೆಯುತ್ತಿದ್ದ ಚಂದನಾವತಿಯ ಸಿರಿವರ್ಧಿಸಿತು. ಹರಿಭಕ್ತಿಯಲ್ಲಿ ಪ್ರಹ್ಲಾದನೂ,ಹರಿಧ್ಯಾನದಲ್ಲಿ ಧ್ರುವನೂ, ಸತ್ತ್ವದಲ್ಲಿ ಬಲಿಯೂ, ಶಾಂತತ್ವದಲ್ಲಿ ವಿಭೀಷಣನೂ, ವೈಷ್ಣವಾಭರಣವೆಂಬ ಕಲೆಯಿಂದ ಮಾಹಿಗೆ ರುಕ್ಮಾಂಗದನೂ, ಕೀರ್ತಿಯಲ್ಲಿ ಪುಂಡರೀಕನೂ ಆಗಿ ಬೆಳೆದ ಪರಮಭಾಗವತ ಶಿರೋಮಣಿ ಚಂದ್ರಹಾಸನಿಂದ ಚಂದನಾವತಿಯ ಜನರೆಲ್ಲ ಪರಮ ಸ್ನೇಹವರಾದರು ಸಕಲ ವಿದ್ಯೆಗಳಲ್ಲೂ ಚತುರನಾದ ಚಂದ್ರಹಾಸ ಬಿಲ್ಲು ವಿದ್ಯೆಯನ್ನು ಕಲಿತ ರೀತಿಯಿದು:-

ವಿದಿತ ವೇದಾರ್ಥಮಂ 'ವಿಷ್ಣು' ವೆಂದರಿದು
ಬು
ವಿಧ ಶಾಸ್ತ್ರತತಿಗೆ 'ಹರಿಗತಿ' ಎಂದು ತಿಳಿದು
ನಧಿಕರಿಸಿ ಬಳಿಕ ನಿಜಭಕ್ತಿ ಚಾಪಕೆ
ಸತ್ತ್ವಗುಣವನಳವಡಿಸಿ ತ
ಸುಧಿಯೆ ಶರಮಂ ಪೂಡಿ, ಕೃಷ್ಣನಂ ಗುರಿಮಾ
ವಿಧುಹಾಸನನುಪಮ ಧನುರ್ವಿದ್ಯೆಯಂ
ಜಗದ
ಅಧಿಕತೆರನಾಗೆ ಸಾಧಿಸಿ, ಪರಮ ಭಾಗ
ಕಲೆಗಳಿಂದೆಸೆದಿರ್ದ

ಹರಿಯನ್ನಾರಾಧಿಸದೆ, ರಾಜ್ಯಮದದಿಂದ ಸೊ ದವರನ್ನೆಲ್ಲ ಸೋಲಿಸಿ, ತಂದೆಗೆ ವಿರುದ್ಧ ಮಲೀ ರನ್ನೆಲ್ಲ ಬಗ್ಗು ಬಡಿದ ಚಂದ್ರಹಾಸ ತನ್ನ ತಂ ತಾಯಿಯರನ್ನು ಇಂದಿರಾದೇವಿ ನಾರಾಯ ರೆಂದು ಭಾವಿಸಿದ್ದನು. ಈತನ ಸಾಹಸಕ್ಕೆ ಮೆಚ್ಚಿ ಕುಳಿಂದಕ ಚಂದ್ರಹಾಸನನ್ನು ಚಂದನಾವತಿ ಅರಸನಾಗಿ ಮಾಡಿದನು.

ಒಮ್ಮೆ ತಂದೆಯ ಅಪ್ಪಣೆಯಂತೆ, ಚಂದನಾ ತಿಯ ರಾಜಧಾನಿಯಾದ ಕುಂತಳದೇಶದ ದೊ

---

ಚಂದ್ರಹಾಸ ಕಪ್ಪಕೊಡಬೇಕಾಯಿತು. ಕುಂತಳ ದೊರೆ ಮಂತ್ರಿಗೆ ರಾಜ್ಯ ಒಪ್ಪಿಸಿ, ಗಾಲವ ಮಹರ್ಷಿಯ ಸೂಕ್ತವನ್ನು ಕೇಳಲು ಹೋಗಿದ್ದರಿಂದ, ಚಂದ್ರಹಾಸನ ಚರರು ದುಷ್ಟಬುದ್ಧಿಗೇ ಕಾಣಿಕೆಯನ್ನರ್ಪಿಸಿದರು. ಈ ಸಂದರ್ಭದಲ್ಲಿ ಚಂದ್ರಹಾಸನು ಉಳಿದಿರುವುದು ದುಷ್ಟಬುದ್ಧಿಗೆ ತಿಳಿಯಿತು. ದೈವಲೀಲೆಯಿಂದ ಕಂಗೆಟ್ಟ ಅವನು ಮಗ ಮದನನಿಗೆ ರಾಜ್ಯನೋಡಿಕೊಳ್ಳಲು ಹೇಳಿ, ಚಂದ್ರಹಾಸನನ್ನು ನೋಡುವ ಕುತೂಹಲದಿಂದ ಚಂದನಾವತಿಗೆ ಬಂದನು. ಅಲ್ಲಿ 'ಗಾಡಿಸಿದ ನೃಪಲಕ್ಷಣ'ದ ಶಶಿಹಾಸನನ್ನು ಕಂಡು, ಅವನಿಗೆ ಹೊಟ್ಟೆಯಲ್ಲಿ ಕುದಿಯಿತು. ಚಂಡಾಲರು ತನಗೆ ವಂಚಿಸಿದ್ದನ್ನು ನೆನೆದು ಬಹಳ ದುಃಖಿತನಾದನು. ಚಂದ್ರಹಾಸನನ್ನು ಕೊಲ್ಲಲು ಮತ್ತೊಂದು ಯೋಜನೆ ಹೂಡಿದನು ವಿಷಹಾಕಿ ಕೊಲ್ಲುವ ಉದ್ದೇಶದಿಂದ ಏಕಾಂತದಲ್ಲಿ ಕುಳಿತು "ಹೊತ್ತುಗಳೆಯದೆ ಬಂದ ಬಳಿಕಿವನ ಕುಲಶೀಲ ವಿತ್ತ ವಿದ್ಯಾವಯೋವಿಕ್ರಮಂಗಳ ನೀಕ್ಷಿಸುತ್ತಿರದೆ, 'ವಿಷವ' ಮೋಹಿಸುವಂತೆ ಕುಡುವುದೀತಂಗೆ ನೀನಿದರೊಳೆಮಗೆ ಉತ್ತರೋತ್ತರಮಪ್ಪುದು-ಎಂದು ಮಗನಿಗೆ ಒಂದು ಪತ್ರವನ್ನು ಬರೆದ. ಚಂದ್ರಹಾಸನನ್ನು ಬಹಳ ಪ್ರೀತಿಸುವಂತೆ ನಟಿಸಿ, ಬಳಿ ಕರೆಸಿ, ಆತ್ಮೀಯನೊಬ್ಬನಿಗೆ ರಹಸ್ಯಕಾರ್ಯವನ್ನು ಒಪ್ಪಿಸುವಂತೆ, ಆ ಪತ್ರವನ್ನು ಅವನಿಗೆ ನೀಡಿದ. ನಾಲ್ಕುಜನ ಸೇವಕರೊಂದಿಗೆ ಹೋಗಿ, ತನ್ನ ಮದನನಿಗೆ ಮುದ್ರೆಸಹಿತ. ಸರ್ವಜನ ಮರಿಯದಂತೆ ಈ ಪತ್ರವ ಕೊಟ್ಟುಬಾ' ಎಂದು ಅಪ್ಪಣೆ ಮಾಡಿದ. ಕುಹಕವರಿಯದ ಚಂದ್ರಹಾಸ ಮಂತ್ರಿಯ ಮಾತಿನಂತೆ ಸೇವಕರೊಂದಿಗೆ ಕುಂತಳ ನಗರಕ್ಕೆ ಬಂದ. ಅಲ್ಲಿ ರಾಜೋಪವನದಲ್ಲಿ ಳಿದು ಕೊಂಡು, ಸ್ನಾನಪೂಜೆ ಭೋಜನಾದಿಗಳನ್ನು ಮುಗಿಸಿಕೊಂಡು, ವಿಶ್ರಾಂತಿಗಾಗಿ ಮಲಗಿದ. ಆಯಾಸಗೊಂಡದ್ದರಿಂದ ಗಾಢನಿದ್ದೆಯಲ್ಲಿ ಮುಳುಗಿದ.

ಮಂತ್ರಿ ದುಷ್ಟಬುದ್ಧಿಯ ಮಗಳು ವಿಷಯೆ ಯಾವುದೋ ಕಾರ್ಯನಿಮಿತ್ತ ರಾಜೋಪವನಕ್ಕೆ ಬಂದಳು ಅವಳು ತಂಗಾಳಿಗೆ ಮೈಯೊಡ್ಡಿ ಸುಖವಾಗಿ ನಿದ್ರಿಸುತ್ತಿದ್ದ ರೂಪದಲ್ಲಿ ಮದನನನ್ನೂ ಮೀರಿಸಿದ್ದ ಚಂದ್ರಹಾಸನನ್ನು ನೋಡಿದಳು. ಕೂಡಲೇ ಮೋಹಪರವಶಳಾದಳು. ಹೇಗಾದರೂ ಅವನನ್ನು ಪಡೆಯಬೇಕೆನಿಸಿತು. ಅವನನ್ನೇ ಮೋಹದಿಂದ ನೋಡುತ್ತಿದ್ದಾಗ ಅವನಂಗದೊಳೆಸೆವ ರಚಿತ ಕಂಚುಕದ ತುದಿಸೆರಗಿನೊಳ್ಕಟ್ಟಿರ್ದ ಪತ್ರಿಕೆ ಕಂಡು ಬಂದಿತು. ನಾಚಿಕೆ ಬಿಟ್ಟು, ಆಪತ್ರವನ್ನು ಕೈಗೆ ತೆಗೆದುಕೊಂಡು ಬಿಡಿಸಿನೋಡಲು ಅದು ಅವಳ ತಂದೆಯ ಪತ್ರವಾಗಿತ್ತು. ಮತ್ತಷ್ಟು ಕುತೂಹಲದಿಂದ ಅದನ್ನು ಓದಿ, ವಿಷಯ ತಿಳಿದವಳೇ ಗಾಬರಿಗೊಂಡಳು. ವರ್ಣಪಲ್ಲಟದ ದೋಷವಿರಬಹುದೆಂದು ಭಾವಿಸಿ ಪತ್ರದಲ್ಲಿದ್ದ 'ವಿಷವ' ಬದಲು 'ವಿಷಯೆ' ಎಂದು ತಿದ್ದಿ ಮೊದಲಿನಂತೆಯೇ ಸೆರಗಿಗೆ ಕಟ್ಟಿ ಹೊರಟು ಹೋದಳು.

ಏನೂ ಅರಿಯದ ಚಂದ್ರಹಾಸ ನಿದ್ರೆಯಿಂದೆದ್ದು "ಕೃಷ್ಣ ಚಾರಿತ್ರಮಂ ಸೊಗಸಾಗಿ ರಚಿಸುತಿಹ ಭಾವುಕರ ಸಂಗೀತ ಗೋಷ್ಠಿಯಿಂದ"ರಂಜಿಸುತ್ತಿದ್ದ ಮದನನ ಆಸ್ಥಾನಕ್ಕೆ ಬಂದ. ಮದನನ ತಂದೆ ನೀಡಿದ ಪತ್ರವನ್ನು ಕೈಗೆ ಕೊಟ್ಟ. ಪತ್ರವನ್ನೋದಿದ ಮದನ ಹರ್ಷದಿಂದ "ಮುನ್ನ ತಂದೆಯ ನಿರೂಪಧ ಕಾರ್ಯಮದರ ಮೇಲೆನ್ನ ಮನವಿವ ನೊಳಕ್ಕುರ್ವರ ಸುತಿದೆ, ರೂಪ ಮನ್ನಿಸುವೊಡನುಜೆಗೀತಂಗೆ ಪಾಸಟಿ; ವಿಚಾರಿಸೆ ಕೃಷ್ಣಭಕ್ತನಿವನು, ಈತಂಗೆ ನನ್ನ ತಂಗಿಯೇ ಯೋಗ್ಯವಧುವೆಂದು ನಿಶ್ಚಯಿಸಿ ವೈಭವದಿಂದ ಮದುವೆಯ ಸಿದ್ಧತೆ ನಡೆಸಿದ. "ವಾಮನಗೋತ್ರ, ಅರವಿಂದನಾಭನೇ ಪಿತ, ಹರಿ ಪಿತಾಮಹ, ಮುರಹರ ಪ್ರಪಿತಾಮಹ" ನಾದ ಚಂದ್ರಹಾಸನಿಗೆ ವಿಷಯೆಯೊಂದಿಗೆ ವಿವಾಹ ನಡೆಸಿದ.

ಈ ಕಡೆ, ಈವೇಳೆಗೆ ಚಂದ್ರಹಾಸನಿಗೆ ಸಾವು ಸಿದ್ಧಿಸಿರಬಹುದೆಂಬ ಆಸೆಯಲ್ಲಿ ದುಷ್ಟಬುದ್ಧಿ ಚಂದನಾವತಿಯಿಂದ ಕುಂತಳಕ್ಕೆ ಪ್ರಯಾಣ ಬೆಳೆಸಿದ. ರಾಜ್ಯದಲ್ಲಿ ನಡೆಯುತ್ತಿದ್ದ ಸಂಭ್ರಮದ ವಾತಾವರಣ ಏಕಿರಬಹುದೆಂದು ಚಿಂತಿಸುತ್ತಿವಾಗಲೇ ಜನರಿಂದ ಚಂದ್ರಹಾಸನ ವಿವಾಹದ ವಿಚಾರ ತಿಳಿಯಿತು. "ಕೂರ್ದಸಿಯುನಿಳುಹಿದಂತಾಯ್ತು ಕರ್ಣದೊಳಾಗ, ಕಾರ್ದುವಕ್ಷಿಗಳರುಣತೆಯನುಗ್ರಕೋಪದಿಂ ಮೀರ್ದನೇ ತನ್ನ ನೇಮವನಕಟ, ಮಗ" ನೆಂದು ಹಲ್ಲು ಕಡಿಯುತ್ತ, ಬಂದು ಎದುರ್ಗೊಂಡ ಮಗನನ್ನು ಕೋಪೋದ್ರೇಕದಿಂದ ಬಾಯಿಗೆ ಬಂದಂತೆ ಬೈದು, ಕೆಲಸ ಕೆಡಿಸಿ ಹೃದಯಶೂಲೆಯನ್ನುಂಟು ಮಾಡಿದ ನಿನಗೆ ವನವಾಸವೇ ಗತಿಯೆಂದು ಜರೆದನು. ಪತ್ರದಲ್ಲಿದ್ದುದನ್ನು ಮತ್ತೊಮ್ಮೆ ಓದುವ ಮನಸ್ಸಾಗಿ ಓದಿನೋಡಲು ಮದನನಿಗೆ ತಾನು ಕೊಟ್ಟ ಶಿಕ್ಷೆ ಅರ್ಥಹೀನವೆಂದು ತಿಳಿಯಿತು. ದೈವವನ್ನು ಕಡೆಯಬಾರಿ ಪರೀಕ್ಷಿಸುವ ಮನಸ್ಸಾಯಿತು. ಈಗಲೂ ಚಂದ್ರಹಾಸನನ್ನು ಮುಗಿಸದಿದ್ದರೆ ತನ್ನ ಸಂತತಿಗೆ ಧಕ್ಕೆ, ಮಗಳು ವಿಷಯೆ ವಿಧವೆಯಾದರೂ ಸರಿ ಎಂದು ಸ್ವಾರ್ಥಸಾಧನೆಗೆ ನಿರ್ಧರಿಸಿದನು. ಚಂದ್ರಹಾಸನನ್ನು ಮತ್ತೊಮ್ಮೆ ಬಳಿಕರೆಸಿ, ಅವನು ತನ್ನ ಅಳಿಯನಾದುದು ಬಹಳ ಸಂತೋಷದವಿಷಯವೆಂಬಂತೆ ನಟನೆ ಮಾಡಿದನು. ಮದುವೆಯ ನಾಲ್ಕನೆಯದಿನ ಏಕಾಂಗಿಯಾಗಿ ಹೋಗಿ ದೇವಿಯನ್ನು ಪೂಜಿಸಬೇಕಾದ್ದು ನಮ್ಮವಂಶದ ಆಚಾರ, ನೀನು ಈ ಕಾರ್ಯವನ್ನು ಮಾಡಬೇಕೆಂದು ಚಂದ್ರಹಾಸನನ್ನು ಒಪ್ಪಿಸಿದ. ಚಂಡಾಲರನ್ನು ಕರೆಸಿ, ಚಂಡಿಕಾಲಯಕ್ಕೆ ಬರುವ ಚಂದ್ರಹಾಸವನ್ನು ಮುಗಿಸಲು ಆಜ್ಞೆನೀಡಿದ.

ದೈವದ ಸಹಾಯದ ಮುಂದೆ ಹುಲು ಮನುಷ್ಯರೇನು ಮಾಡಲು ಸಾಧ್ಯ! ಕುಂತಳದ ರಾಜ ಯಾವುದೋ ಕಾರಣಕ್ಕೆ ಚಂದ್ರಹಾಸನನ್ನು ಕರೆಯಬೇಕಾಯಿತು. ಆಕಾರ್ಯಕ್ಕೆ ಮದನನನ್ನೆ ನೇಮಿಸಿದ. ಚಂದ್ರಹಾಸ ಸಕಲ ಪೂಜಾಸಿದ್ಧತೆಯೊಂದಿಗೆ ಚಂಡಿಕಾಲಯಕ್ಕೆ ಹೊರಟಿದ್ದ. ಚಂದ್ರಹಾಸನನ್ನು ಕರೆಯಲು ಹೊರಟ ಮದನ ಮಾರ್ಗಮಧ್ಯದಲ್ಲಿ ಎದುರಾದ. ಹೊರಟಿರುವುದೆಲ್ಲಿಗೆ ಎಂದು ಕೇಳಲು, 'ತವಪಿತಂ ಪೇಳ್ದ ಸುವ್ರತವೆನಲ್ಚಂಡಿಕಾ ಪೂಜೆಯಂ ಮಾಡಿ ಬಾದಪೆನೆಂದನು', ಮದನ ಚಂದ್ರಹಾಸನನ್ನು ರಾಜನ ಬಳಿ ಕಳುಹಿಸಿ, ತಾನೇ ದೇವಾಲಯಕ್ಕೆ ಹೋದನು. ಚಂಡಾಲರು ಮದನನನ್ನೆ ಚಂದ್ರಹಾಸನೆಂದು ತಿಳಿದು ಸಾಯಿಸಿದರು. ದುಷ್ಟಬುದ್ಧಿಗೆ ಈ ವಿಷಯ ತಿಳಿಯಲು ನಮ್ಮುಪಾಯವೇ ನಮಗಪಾಯಮಂ ತಂದುದು ಎಂದು ಕಡುಶೋಕದಿಂದ, ವೈಷ್ಣವ ದ್ರೋಹಕ್ಕೆ ತನಗುಂಟಾದ ಶಿಕ್ಷೆಯಿದೆಂದು ಹಲುಬುತ್ತ, ಪಶ್ಚಾತ್ತಾಪ ಪಡುತ್ತ ತನ್ನಿಂದಳಿದನೆಂಬಳಲ್ಕಿಗೆ ಮಂತ್ರಿ ಸೈರಿಸದೆ ಕೆಲಬಲದ ಕಂಬಂಗಳಂಪಾಯಲು ಕುಂಬಳದ ಕಾಯಂತೆ ಚಿಪ್ಪಾಗಿ ನಿಜಮಸ್ತಕಂ ಬಿರಿದು ಸತ್ತುಬಿದ್ದನು

ಚಂಡಿಕಾಲಯದ ಅರ್ಚಕನಿಂದ, ತಂದೆ ಮಕ್ಕಳು ಸಾವನ್ನಪಿದ ಸುದ್ದಿ ಚಂದ್ರಹಾಸನಿಗೆ ತಿಳಿಯಿತು. ತನ್ನಿಂದ ಅವರಿಬ್ಬರ ಸಾವು ಸಂಭವಿಸಿತೆಂದು ಭಾವಿಸಿ, ಕಡುನೊಂದು, ಹೇಗಾದರೂ ಮಾಡಿ ಅವರಿಬ್ಬರನ್ನು ಬದುಕಿಸಲು ನಿಶ್ಚಯಿಸಿ, ಚಂಡಿಯ ಮುಂದೆ ನಿಂತು "ಖಂಡಿಸಿದಲೇ ತನ್ನ ಭಾಗ್ಯಮಂ ತಪ್ಪಾವುದಂಡಲೆದು ಪಡೆವೆನಿವರಸುಗಳಂ ಮೀರಿದೊಡೆ ಪುಂಡರೀಕಾಂಬಿಕನ ಸಾಯುಜ್ಯಮೆನಗಾಗಲಿ" ಎಂದು ಪ್ರತಿಜ್ಞೆಮಾಡಿದನು. ಅಗ್ನಿಯನ್ನು ಸಿದ್ಧಪಡಿಸಿ, ತನ್ನದೇಹದ ಮಾಂಸವನ್ನೆ ಚೂರುಚೂರಾಗಿ ಕೊಯ್ದು ಹೋಮ ಮಾಡುತ್ತಾ, ಪೂರ್ಣಾಹುತಿಗೆ ಶಿರವನರಿದಪೆನೆಂದು, ಖಡ್ಗವನ್ನು ತನ್ನ ಕತ್ತಿಗೆ ಇಟ್ಟುಕೊಂಡು ಸಾಯಲನುವಾದನು. ಆಗ ರುದ್ರಾಣಿ "ಬೆಚ್ಚಿದಂತೆಸೆವ ಪೀಠವನಿಳಿದು, ರುದ್ರಾಣಿ ಬೆಚ್ಚರದೊಳೈತಂದು ಕಯ್ಯಂ, ಬಾಳಂ ಪಿಡಿದು ನಿಚ್ಚಟದ ಹರಿಭಕ್ತಿಗಾಂ ಪ್ರೀತಿಯಂ, ತಳೆದೆ" ಎಂದು ಹೇಳಿ ಎರಡು ವರವನ್ನು ಕೇಳೆಂದಳು. ಚಂದ್ರಹಾಸನು 'ಆವಾವ ಜನ್ಮದೊಳೆನಗೆ ರಾಜೀವನಾಭನ ಭಕ್ತಿ ದೊರಕೊಳಲಿ, ಮಡಿದಿಹ ಮಂತ್ರಿ, ಮಂತ್ರಿಸುತರು ಜೀವಿಸಲಿ' ಎಂಬ ಎರಡು ವರಗಳನ್ನು ಕೇಳಿ ಪಡೆದನು. ತನ್ನ ಶತ್ರುವನ್ನು ಬದುಕಿಸಿದ್ದು ಚಂದ್ರಹಾಸನ ದೊಡ್ಡಗುಣ.

తిరుమల తిరుపతి దేవస్థానగళు

# ತಿರುಮಲೆಯಲ್ಲಿ ವಸತಿಗಾಗಿ ದಾನಯೋಜನೆ

ಕಲಿಯುಗ ವೈಕುಂಠವೆಂದು ಹೆಸರಾದ ತಿರುಮಲೆ ಶ್ರೀ ವೆಂಕಟೇಶ್ವರನ ಆವಾಸಸ್ಥಳ. ಇಲ್ಲಿಗೆ ಸಹಸ್ರಾರು ಮಂದಿ ಯಾತ್ರಿಕರು ಪ್ರತಿದಿನವೂ ಬರುತ್ತಾರೆ. ಅನುದಿನವೂ ಹೆಚ್ಚುತ್ತಿರುವ ಯಾತ್ರಿಕರ ವಸತಿ ಸೌಕರ್ಯಗಳಿಗಾಗಿ ತಿ. ತಿ. ದೇ. ಗಳು ದಾನಯೋಜನೆಯಲ್ಲಿ ಕಾಟೇಜುಗಳು, ಸತ್ರಗಳು, ಅತಿಥಿಗೃಹಗಳನ್ನು ನಿರ್ಮಿಸುತ್ತಿದೆ. ವಿವಿಧ ಯೋಜನೆಗಳ ವಿವರಗಳು ಈ ರೀತಿ ಇವೆ.

## ರಾಮಬಗೀಚಾ ಅತಿಥಿಗೃಹ

ಈ ಅತಿಥಿಗೃಹವನ್ನು ದೇವಾಲಯದ ಈಶಾನ್ಯ ಭಾಗದಲ್ಲಿ ನಿರ್ಮಿಸಲಾಗುವುದು.

* ಇದು ಪ್ರತಿಯೊಂದರಲ್ಲೂ 50 ಸೂಟ್‌ಗಳಿರುವ ಮೂರು ಅಂತಸ್ತುಗಳನ್ನು ಹೊಂದಿದ್ದು, ಪ್ರತಿ ಸೂಟ್ 14'×18' ಗಳದ್ದಾಗಿ, ಸುಮಾರು 600 ಚದರಡಿ ಪ್ಲಿಂತ್ ಏರಿಯಾದಲ್ಲಿ ಸಾಮಾನ್ಯ ಅಂಗಳವನ್ನು ಹೊಂದಿರುತ್ತದೆ.
* ದಾನಿಗಳು ಒಂದು ಸೂಟ್ ನಿರ್ಮಾಣಕ್ಕೆ ರೂ 60,000 ನೀಡಬೇಕಾಗುವುದು.

## ಸಪ್ತಗಿರಿ ಧರ್ಮಶಾಲೆ

8.5 ಕೋಟಿ ರೂಗಳ ವೆಚ್ಚದ ಈ ಭಾರೀ ಯೋಜನೆಯನ್ನು ಸಪ್ತಗಿರಿ ಸತ್ರಗಳ ನಿರ್ಮಾಣಕ್ಕಾಗಿ ತಿ.ತಿ.ದೇ. ಕೈಗೊಂಡಿದೆ. ಪ್ರತಿ ಸೂಟ್‌ನ ನಿರ್ಮಾಣ ವೆಚ್ಚ 80000 ರೂಗಳು

ದಾನಿಗಳು 40,000 ರೂಗಳನ್ನು ತಮ್ಮ ಹೆಸರಿನ ಒಂದು ಸೂಟ್‌ಗಾಗಿ ನೀಡಬೇಕಾಗುವುದು.

ಎ. ಟಿ. ಸಿ. ಕಾಟೇಜುಗಳು ಹಾಗೂ ಎಂ. ಬಿ. ಸಿ. ಕಾಟೇಜುಗಳಲ್ಲಿನ ಮೇಲಂತಸ್ತು ಕೋಣೆಗಳಿಗೂ ಇದೇ ರೀತಿ ದಾನಗಳನ್ನು ನೀಡಬಹುದು.

## ದಾನಿಗಳಿಗೆ ಪ್ರತಿಫಲ

* ದಾನಿಗಳಿಗೆ ತಮ್ಮ ದಾನದ ಪ್ರತಿಯಾಗಿ ವರ್ಷಕ್ಕೆ 60 ದಿನಗಳ ಕಾಲ ತಿರುಮಲೆಯಲ್ಲಿ ಉಚಿತ ವಸತಿ ದೊರೆಯುವುದು.
* ಕಂಪನಿಗಳಿಗೂ, ಸಂಸ್ಥೆಗಳಿಗೂ ಈ ಸೌಲಭ್ಯ 15 ವರ್ಷಕ್ಕೆ ಮಾತ್ರ ಸೀಮಿತ
* ದಾನಿಗಳ ಬಂಧುಗಳಿಗೆ ವಸತಿ ನೀಡುವಲ್ಲಿ ಆದ್ಯತೆ, ನೀಡಲಾಗುವುದು.
* ಪ್ರತಿ ಕಾಟೇಜು/ಸೂಟ್ ನ ಹೊರಗೆ ದಾನಿಗಳ ಹೆಸರನ್ನು ಕೆತ್ತಿಡಲಾಗುವುದು.

ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿಯವರ ಹೆಸರಿನಲ್ಲಿ ಪಡೆದ ಡಿ.ಡಿ. ಯನ್ನು ತಿರುಮಲೆಯ ಎಕ್ಸಿಕ್ಯೂಟಿವ್ ಇಂಜನಿಯರ್–V ಇವರಿಗೆ ಕಳುಹಿಸಿ.

**ತುಸು ಧನವನ್ನು ವಿನಿಯೋಗಿಸಿ, ಪುಣ್ಯಫಲವನ್ನು ಪಡೆಯಿರಿ**

ಮುಕ್ಕ ವಿವರಗಳನ್ನು ಪಡೆಯಬಹುದಾದ ವಿಳಾಸ :

**ಕಾರ್ಯನಿರ್ವಹಣಾಧಿಕಾರಿ**
**ತಿ.ತಿ. ದೇವಸ್ಥಾನಗಳು**
**ತಿರುಪತಿ–೫೧೭೫೦೧ ಆಂಧ್ರಪ್ರದೇಶ.**

**ಕಾರ್ಯನಿರ್ವಹಣಾಧಿಕಾರಿ**

# ಮುನಿತ್ರಯ

"ತತ್ತ್ವತ್ರಯ", "ವೇದತ್ರಯ", "ವರ್ಣತ್ರಯ", "ಪದತ್ರಯ", "ರಹಸ್ಯತ್ರಯ", "ಉಪದೇಶತ್ರಯ", "ಪುರುಷಾರ್ಥತ್ರಯ" ಮತ್ತು "ತಾಪತ್ರಯ" ಹೀಗೆ ತ್ರಿತ್ವ ಸಂಖ್ಯೆಯಲ್ಲಿ ಮತ್ತು ಅನುಭವದಲ್ಲಿ ಗೋಚರವಾಗುತ್ತದೆ. ಅದೇರೀತಿ ಸಂಪ್ರದಾಯದಲ್ಲಿ ಮುನಿತ್ರಯ ಎಂಬ ಅಂಶ ವ್ಯಕ್ತವಾಗುತ್ತದೆ. ಪ್ರಣವದಲ್ಲಿ ಮೊದಲನೆಯದು ಕಾರಣವರ್ಣ. ಎರಡನೆಯದು ಸಂಬಂಧಬೋಧಕ, ಮೂರನೆಯದು ಸಂಬಂಧಕ್ಕೆ ಒಳಪಟ್ಟದ್ದು. ಅಷ್ಟಾಕ್ಷರಗಳಲ್ಲಿ ಪ್ರಣವ ಜೀವಾತ್ಮನಲ್ಲಿ ಕೊನೆಗೊಳ್ಳುತ್ತದೆ. ನಾರಾಯಣ ಪದದಲ್ಲಿ ಕಳಂಕರಹಿತ ಚೇತನನ ವ್ಯಾಪಾರ ಗೋಚರವಾಗುತ್ತದೆ. ಕೊನೆಯ ವಿಭಕ್ತಿಯಲ್ಲಿ ಪ್ರಯೋಜನಾಂಶ ಕಾಣುತ್ತದೆ. ತತ್ತ್ವದಲ್ಲಿ ಪ್ರಕೃತಿಯ ಸಂಪರ್ಕದಿಂದ ಚೇತನನು ಕಲುಷಿತನಾಗುತ್ತಾನೆ. ಈಶ್ವರನ ಸಂಪರ್ಕದಿಂದ ಪರಿಶುದ್ಧನಾಗುತ್ತಾನೆ. ಪ್ರಕೃತಿ ಪ್ರಾಧಾನ್ಯೇನ ಶರೀರರೂಪದಲ್ಲಿದ್ದುಕೊಂಡು ಆತ್ಮನನ್ನು ಸ್ವಾಭಿಮುಖವಾಗಿ ಎಳೆಯುತ್ತದೆ. ಆತ್ಮನು ಪರಮಾತ್ಮನಿಗೆ ಶರೀರವಾಗಿ ಅವನನ್ನು ಸ್ವಾಭಿಮುಖವಾಗಿ ಎಳೆಯುತ್ತಾನೆ. ದೇಹಾಭಿಮಾನ ಅಜ್ಞಾನ ನಿಮಿತ್ತದಿಂದ ಚೇತನನಲ್ಲಿ ಮೂಡುತ್ತದೆ. ಈಶ್ವರನಲ್ಲಿ ಈಶ್ವರಾಭಿಮಾನ ಲೀಲೆಯಲ್ಲೇರ್ಪಡುತ್ತದೆ. ಪ್ರಕೃತಿ ಚೇತನನ ಭೋಗ್ಯ. ಜೀವ ಈಶ್ವರನ ಭೋಗ್ಯ. ಈಶ್ವರ ಸರ್ವಭೋಗ್ಯನಾಗಿರುವುದರಿಂದ ಚೇತನ ಮತ್ತು ಅಚೇತನ ವಸ್ತು ನೇರವಾಗಿ ಈಶ್ವರನಿಗೆ ಭೋಗ್ಯ. ಈ ಭಾವನೆ "ಅಯನ" ಸಂಬಂಧಜ್ಞಾನ ಉಳ್ಳವರಿಗೆ ಸಂಭವಿಸುತ್ತದೆ. ಈ ಭಾವನೆ ತಪ್ಪಿದರೆ "ನಾರ"ವಸ್ತುಗಳ ಪರಸ್ಪರ ಸಂಬಂಧ ಅನಾದಿ ಎಂದೂ ಅದರ ವಿನಾಶ ಆತ್ಮಕ್ಷೇಮಕ್ಕೆ ಅತ್ಯಗತ್ಯವೆಂದೂ ಅನುಭವಕ್ಕೆ ಗೋಚರವಾಗುತ್ತದೆ. ನಾರ ಸಂಬಂಧ ಅವಿದ್ಯಾಜನಿತವಾದುದರಿಂದ ನಿತ್ಯವಲ್ಲವೆಂದೂ ಭಾಸವಾಗುತ್ತದೆ. ನಿತ್ಯ ಸಂಬಂಧಜ್ಞಾನ ಉಂಟಾದರೆ ನಾರ ಸಂಬಂಧವು, ಅದಕ್ಕೆ ಅಂಗವಾಗಿ ತೋರುತ್ತದೆ. ಮತ್ತು ಅನಿತ್ಯವಾದುದರಿಂದಲೂ ನಿತ್ಯಸಂಬಂಧವನ್ನು ಮರೆಸುವ ಸಂಬಂಧ ಏರ್ಪಡುವುದರಿಂದಲೂ ಅನಪೇಕ್ಷ್ಯವಾಗಿರುತ್ತದೆ. ಆದುದರಿಂದ ಅನುಭವದಲ್ಲಿ ಮತ್ತು ಶಾಸ್ತ್ರದಲ್ಲಿ ಮುಖ್ಯವಾಗಿ ತೋರುವುದು ಒಂದೇ ಭಾವನೆ. ಮೂಲಪದಾರ್ಥಕ್ಕೆ ಹೊಂದಿಕೊಂಡಿರುವಂತೆ ಪರಾಧೀನ ಪದಾರ್ಥಗಳು ತಮ್ಮ ಸ್ವರೂಪ ಸ್ಥಿತಿಗಳನ್ನು ಮುಂದುವರಿಸಬೇಕೆಂಬುದು. ಅಲ್ಲದಿದ್ದರೆ "ಮೂಲನಾಶೇ ಸರ್ವನಾಶಃ". ಪ್ರಕೃತ ವಿಶಿಷ್ಟಾದ್ವೈತ ಸಿದ್ಧಾಂತದಲ್ಲಿ "ಅ" ಕಾರದ ಮಹಿಮೆಯನ್ನು ಮರೆತರೆ ಮಕಾರಕ್ಕೆ ಉಳಿವೇ ಇರುವುದಿಲ್ಲ. ಮತ್ತು ಅಕಾರದ ವ್ಯಾಪ್ತಿಯನ್ನು ತೋರಿಸುವ "ಉ"ಕಾರವನ್ನು ಪೂರ್ಣವಾಗಿ ಅರ್ಥಮಾಡಿಕೊಳ್ಳದಿದ್ದರೆ "ಮ" ಕಾರಕ್ಕೆ ಎಂದೆಂದಿಗೂ ಸಂಕಟ ಪರಂಪರೆ ತಪ್ಪುವುದಿಲ್ಲ. ಈ ನೀತಿಯನ್ನು ಅನುಸರಿಸಿ ಮುನಿತ್ರಯ ಸಂಪ್ರದಾಯ ಹುಟ್ಟಿಬೆಳೆದು ಪರಿಪಾಲಿತವಾಗಿ ಬಂದಿದೆ. ವ್ಯಾಕರಣದಲ್ಲಿ ಕಂಡುಬರುವ ಮುನಿತ್ರಯಕ್ಕೂ ವಿಶಿಷ್ಟಾದ್ವೈತದಲ್ಲಿ ತೋರುವ ಮುನಿತ್ರಯಕ್ಕೂ ದೃಷ್ಟಿಯ ಲವಲೇಶವೂ ಸಂಬಂಧವಿಲ್ಲ. ವ್ಯಾಕರಣದಲ್ಲಿ "ಯಥೋತ್ತರಂ ಮುನೀನಾಂ ಪ್ರಾಮಾಣ್ಯಂ" ಅಂದರೆ ತತ್ತ್ವವು ಕಾಲಸಾಗಿದಂತೆ ಭಿನ್ನಭಿನ್ನ ಋಷಿಗಳ ಮೂಲಕ ಪುಷ್ಟವಾಗುತ್ತದೆ. ಆದರೆ ವಿಶಿಷ್ಟಾದ್ವೈತದಲ್ಲಿ ತೋರುವ ಮುನಿತ್ರಯ ಪದ್ಧತಿಯಲ್ಲಿ ಕಾಲಕಳೆದಂತೆ ತತ್ತ್ವದ ಪರಿಪೂರ್ಣತೆ ಕುಂದಲಾಗದು ಎಂಬ ಭಾವನೆ. ಋಷಿಗಳ ಕರ್ತವ್ಯ ಮೂಲನಾಶವನ್ನು ತಡೆಗಟ್ಟುತ್ತದೆ.

ಶ್ರೀ ವೈಷ್ಣವ ಸಂಪ್ರದಾಯದಲ್ಲಿ ವೇದಾಂತ ದರ್ಶನದ ಸ್ವರೂಪ ಶಾರೀರಕ ಮೀಮಾಂಸೆಯಲ್ಲಿ ಮತ್ತು ಪಾಂಚರಾತ್ರದಲ್ಲಿ ಮತ್ತು ಭಗವದ್ಗೀತೆಯಲ್ಲಿ ಸ್ಫುಟವಾಗಿ ಕಾಣುತ್ತದೆ. ಇದು ಪ್ರಸ್ಥಾನತ್ರಯವೆನ್ನಿಸಿಕೊಳ್ಳುತ್ತದೆ. ಇದರಲ್ಲಿ ಉಪದೇಶ ನೀಡುವವರು ಬೇರೆಬೇರೆಯಾಗಿರುತ್ತಾರೆ. ಆದರೆ ಉಪದೇಶದ ನಿರ್ಣಯ ಏಕರೂಪವಾಗಿರುತ್ತದೆ. ನಾಥಮುನಿಗಳು ವಿಶಿಷ್ಟಾದ್ವೈತದ ಸಂರಕ್ಷರೆಂದೂ ಪ್ರಥಮಾಚಾರ್ಯರೆಂದೂ ಅಂಗೀಕೃತವಾಗಿದೆ. ಅದರ ಪರಿಪಾಲನೆ ಅವರ ಪೌತ್ರರಾದ ಯಾಮುನಾಚಾರ್ಯರ ಪಾಲಿಗೆ ಸೇರಿತು. ಅದರ ಸ್ಥಿರಪ್ರತಿಷ್ಠಾಪನೆ ರಾಮಾನುಜ ಮುನಿಯ ಹೊಣೆಯಾಯಿತು. ಈ ರೀತಿ ಮುನಿಶಬ್ದವನ್ನು ಪಡೆದ ಮೂರು ಮಹಾವ್ಯಕ್ತಿಗಳು ಪ್ರಯತ್ನದ ಫಲವಾಗಿ ವಿಶಿಷ್ಟಾ-ದ್ವೈತದ ಪ್ರಭಾವ ಶಾಶ್ವತವಾಗಿ ಬೆಳಗುತ್ತದೆ ಎಂಬುದು ವಿದ್ವಜ್ಜನರ ಅವಿಚಾಲ್ಯವಾದ ನಂಬಿಕೆ. ಇದನ್ನು ಯಾರೂ ಅಲ್ಲಗಳೆಯುವಂತಿಲ್ಲ ಆದರೆ ಒಂದಂಶವನ್ನು ಮಾತ್ರ ಇಲ್ಲಿ ಗಮನಿಸಬೇಕಾಗುತ್ತದೆ. ಅದು ಮುನಿತ್ರಯ ಶಬ್ದದಲ್ಲಿ ತೋರುವ ಮೂವರು ಯಾರು ಎಂಬುದೇ ಪ್ರಶ್ನೆ. ಶ್ರೀರಾಮಾನುಜ ಮುನಿಯ ಆಪ್ತತಮರಾದ ಕೂರೇಶರು ಈ ವಿಷಯವಾಗಿ ತಮ್ಮ ನಿಲುವನ್ನು ಪ್ರಕಟಪಡಿಸಿದ್ದಾರೆ. "ವರದರಾಜಸ್ತವ" ಎಂಬ ಅರ್ಥಪಂಚಕ ಬೋಧಕವಾದ ಗ್ರಂಥದಲ್ಲಿ ಈ ವಿಷಯ ಪ್ರಸ್ತಾಪವಾಗಿದೆ. ಕೂರೇಶರು ರಾಮಾನುಜರ ಪಾದಗಳನ್ನು ನಂಬಿದವರು. ರಾಮಾನುಜರು ಮುನಿತ್ರಯ ಪದ್ಧತಿಯನ್ನು ಅವಲಂಬಿಸಿದವರು ಅವರ ಅಭಿಪ್ರಾಯದಂತೆ ಮುನಿತ್ರಯ ಶಬ್ದದಲ್ಲಿ ಸೇರಿಕೊಂಡಿರುವವರಾರೆಂದರೆ ಆರೋಹಣ ಕ್ರಮದಲ್ಲಿ ಯಾಮುನ ಮುನಿ, ಅವರ ಹಿರಿಯರಾದ ನಾಥಮುನಿ ಮತ್ತು ಅವರ ಏಕೈಕ ಹಿರಿಯರಾದ ಪರಾಂಕುಶಮುನಿ ಎಂದು ವ್ಯಕ್ತಪಟ್ಟಿದೆ. ಅವರೋಹಣ ಕ್ರಮದಲ್ಲಿ ಶ್ರೀಯಃಪತಿಯಾದ ಅಕಾರಶಬ್ದವೇದ್ಯನಾದ ಲಕ್ಷ್ಮೀನಾರಾಯಣನಿಗೆ ದಾಸ್ಯಸಂಬಂಧವನ್ನು ಮುಂದಿಟ್ಟು ಜೀವನ ನಡೆಸಿದ ಶಠಕೋಪಮುನಿ, ಅವರ ಸಂಪ್ರದಾಯವನ್ನು ಅದೇರೀತಿ ಪರಿಪಾಲಿಸಿಕೊಂಡು ಒಂದು ಸಂಭಾವಿತವಾದ ಕಳಂಕವನ್ನು ತೊಳೆದುಹಾಕುವ ಕ್ರಮದಲ್ಲಿ (ಉದ್ಯಮದಲ್ಲಿ) ವೃತ್ತಿಕಾರ ಮತವನ್ನೂ ಗಮನಿಸಬೇಕೆಂಬ ಹೆಬ್ಬಯಕೆಯನ್ನು ಹೊರಗೆಡಹಿ ಅದು ತಮ್ಮಿಂದ ಸಾಧ್ಯವಾಗದುದರಿಂದ ತಮ್ಮ ಏಕೈಕ ಉತ್ತರಾಧಿಕಾರಿಯಾದ ಶ್ರೀರಾಮಾನುಜರ ಮೂಲಕವಾಗಿ ಆ ದೋಷವನ್ನು ತೊಡೆದುಹಾಕಿದರು. ಆದ್ದರಿಂದ ನಿಜವಾಗಿಯೂ ಶ್ರೀ ವೈಷ್ಣವ ಸಂಪ್ರದಾಯದಲ್ಲಿ ಮುನಿತ್ರಯವೆಂದರೆ ಮೂರು ಮುನಿಗಳಿಂದ

ಶ್ರೀ ಎಂ. ಶ್ರೀನಿವಾಸೈಂಗಾರ್



ಬಂದ ತತ್ತ್ವರಹಸ್ಯ. ಅದರಲ್ಲಿ ಪ್ರಥಮ ಮುನಿ ಪರಾಂಕುಶರಾದರಿಂದ ಅವರನ್ನು ಉದಾಸೀನತೆಯಿಂದ ಭಾವಿಸಿದರೆ ವಿಶಿಷ್ಟಾದ್ವೈತದಲ್ಲಿ ಮುನಿತ್ರಯಸಂಪ್ರದಾಯ ಏರ್ಪಡುವುದಿಲ್ಲ. ಪರಾಂಕುಶರನ್ನು ಬಿಟ್ಟು ಮುನಿತ್ರಯ ಶಬ್ದಕ್ಕೆ ಅರ್ಥ ಕಲ್ಪನೆ ಮಾಡಿದರೆ ಬುಡವಿಲ್ಲದೆ ಬೆಳೆಯುವ ವೃಕ್ಷದಂತೆ ಇಂತಹ ಭಾವನೆಯನ್ನು ಜನಗಳಲ್ಲಿ ಹರಡಿದರೆ ಶ್ರೀ ರಾಮಾನುಜರ ನುಡಿಯಲ್ಲಿ "ಸತಃ ಪರಿಹಸಂತಿ".

ಶ್ರೀ ಭಾಷ್ಯಕಾರರಾದ ಶ್ರೀ ರಾಮಾನುಜರಿಗೆ ಪರಮ ಗುರು ಯಾಮುನಾಚಾರ್ಯರು. ಅವರ ಮಾರ್ಗದರ್ಶಿ ನಾಥಮುನಿಗಳು. ಅವರಿಗೆ ಸ್ಫೂರ್ತಿದಾಯಕರು ಪರಾಂಕುಶರು. ಪರಾಂಕುಶರ ಸ್ವರೂಪ ಭಗವದ್ವಲ್ಲಭೆಯಾದ ಶ್ರೀದೇವಿಯ ದಾಸ್ಯ. ಅಂದಮೇಲೆ ಗುರು ಪರಂಪರೆಯಿಂದ ಲಬ್ಧವಾದ ತಾತ್ತ್ವಿಕ ಸಂಪ್ರದಾಯವನ್ನು ಬೆಳೆಸುವುದೇ ಶ್ರೀ ರಾಮಾನುಜರ ಪರಮಗುರಿ. ಇದಕ್ಕೆ ಪರಾಂಕುಶರನ್ನರಿಯದ ಬ್ರಹ್ಮಸೂತ್ರದಲ್ಲಿ ಸ್ಥಾಪಿತವಾಗಿರುವ ತಾತ್ತ್ವಿಕರೀತಿ ಹೇಗಿರಬಹುದೆಂದು ವಿಚಾರಿಸಿ ವೃತ್ತಿಕಾರ ಮತವನ್ನನುಸರಿಸಿ ಯಾಮುನಾಚಾರ್ಯರ ಅಭಿಮತಕ್ಕೆ ಅನ್ಯಥಾ ಇಲ್ಲವೆಂದು ನಿರ್ಣಯಿಸಲಾಗಿದೆ. ಆದುದರಿಂದ "ಪೂರ್ವಾಚಾರ್ಯ ಸುರಕ್ಷಿತಾಂ" ಎಂಬ ನುಡಿಗೆ ಕೇವಲ ತೈತ್ತಿರೀಯದಲ್ಲಿ ಕಾಣುವ ಸರಣಿಯೇ ಅಲ್ಲ. ಛಾಂದೋಗ್ಯದಲ್ಲೂ ಕಂಡುಬರುವ ಸರಣಿಯು ಅತಿ ಮುಖ್ಯವಾದುದು. ಇವುಗಳಿಗೆ ಪರಸ್ಪರ ವಿರೋಧ ಯಾವಹಂತದಲ್ಲೂ ಕಾಣುವುದಿಲ್ಲ. ಇದಕ್ಕೆ ಕಾರಣ ಛಾಂದೋಗ್ಯದಲ್ಲಿ ಅನುವರ್ತನ ಕ್ರಮ, ತೈತ್ತಿರೀಯದಲ್ಲಿ ವಿಸರ್ಜನ ಕ್ರಮ, ಒಂದು ಸ್ವಾಭಾವಿಕ ಮತ್ತೊಂದು ಔಪಾಧಿಕ. ಕೊನೆಯ ಹಂತದಲ್ಲಿ ಛಾಂದೋಗ್ಯದಲ್ಲಿ ಸಾಮಾನಾಧಿಕರಣ್ಯ ಉಳಿದುಕೊಳ್ಳುತ್ತದೆ.

ತೈತ್ತಿರೀಯದಲ್ಲಿ ವೈಯಧಿಕರಣ್ಯ ನೀಗುವುದಿಲ್ಲ ಎಂದು ವೇದಾಂತಿಗಳಿಗೆ ತೋರಬಹುದು. ಆ ದೃಷ್ಟಿಯಿಂದ ಪರಿಣಾಮದಲ್ಲಿ ಫಲಭೇದವಿಲ್ಲ ಎಂದು ಸಾರಬಹುದು. ಇಲ್ಲಿ ಅತಿ ಗಮನಾರ್ಹವಾದ ವಿಷಯ ಒಂದು. ಸಾಮಾನಾಧಿಕರಣ್ಯ ಮತ್ತು ವೈಯಧಿಕರಣ್ಯ ಎಂಬ ಎರಡು ಕ್ರಮಗಳಲ್ಲೂ ಜೀವೇಶ್ವರ ಸ್ವರೂಪ ಒಂದೇ ಒಂದಾಗಿರಬೇಕು. ಸಾಮಾನಾಧಿಕರಣ್ಯದಲ್ಲಿ ಪ್ರತಿಜ್ಞಾರೂಪವಾದುದು ಜೀವಾತ್ಮನ ಪ್ರಕಾರತ್ವ. ವೈಯಧಿಕರಣ್ಯದಲ್ಲಿ ಜೀವಾತ್ಮನ ವಿಶೇಷತ್ವ ನಿಷೇಧಾರ್ಹವಾಗಿ ಪ್ರಕಾರತ್ವದಲ್ಲಿ ಪರ್ಯವಸಾನವನ್ನು ಹೊಂದಬೇಕು. ಅಲ್ಲವಾದರೆ ಏಕಶಾಸ್ತ್ರದಲ್ಲಿ ಫಲಭೇದಕ್ಕೆ ಅವಕಾಶ ಉಂಟಾಗುತ್ತದೆ. ಸ್ವರೂಪ ತದನುಗುಣವೃತ್ತಿ ತದನುಗುಣ ಫಲ. ಆ ಕಾರಣದಿಂದ ಸ್ವರೂಪ ಅನುಗುಣವಾಗಿ ಪಾರತಂತ್ರ್ಯವನ್ನು ಸಂಕಲ್ಪ ಪೂರ್ವಕವಾಗಿ ವೃತ್ತಿಫಲಗಳೊಡನೆ ಬೆರಸುವುದು ಅಸ್ವಾಭಾವಿಕ. ಪೃಥಕ್ ದ್ರವ್ಯವಾದ ಚೇತನನಿಗೆ ನಿತ್ಯ ನಿರತಿಶಯ ಫಲಪ್ರಾಪ್ತಿ ಸಂಭವಿಸಬೇಕಾದರೆ ಪೂರ್ವ ಮೀಮಾಂಸೆಯಲ್ಲಿ ಕಂಡ ಸಿದ್ಧಪದಾರ್ಥ ನಿರಾಕರಣೆಯ ಪೂರ್ವಕವಾಗಿ ಶ್ರುತ್ಯುಪದಿಷ್ಟವಾದ ರೀತಿಯಲ್ಲಿ ನಿರಂತರ ಕರ್ಮನಿಷ್ಠೆಯನ್ನವಲಂಬಿಸಿ "ಅಪೂರ್ವ" ,
ಒಂದು ಶಕ್ತಿಯನ್ನು ಪಡೆದು ತನ್ಮೂಲಕ ಆತ
ಸಹಜವಾದ ನಿತ್ಯನಿರಂತರ ಸುಖಾನು
ಮೋಕ್ಷವೆಂದೂ ತೀರ್ಮಾನಿಸಲಾಗಿದೆ.
ವೇದದ ಏಕದೇಶ ಗ್ರಹಣದ ಫಲವಾಗಿದೆ.
ದರಿಂದ ನಿಖಿಲವೇದ ತಾತ್ಪರ್ಯಕ್ಕೆ ವಿ
ವಾದುದು ಅಂತೆಯೇ ಉಪನಿಷದ್ಭಾ
ಕಂಡುಬರುವ ಸ್ವತಃಸಿದ್ಧ ವಸ್ತುವಾದ ಪರಬ್ರ
ಕ್ಯವಾಡದಿಂದಲೇ ನಿತ್ಯ ನಿರತಿಶಯ ಸುಖಪ್ರಾ
ಎಂಬ ನಿರ್ಧಾರ ಏರ್ಪಟ್ಟು, ಪೂರ್ವಭಾಗ
ಕೈಗೊಂಡ ಕರ್ಮಪ್ರಭೃತಿ ಚೇತನನ ಪ್ರಂ
ವನ್ನು ಪರಬ್ರಹ್ಮನ ಪ್ರಸಾದ ಜನನಕ
ಬಳಸುವ ರೀತಿ ತೋರಿಸುತ್ತದೆ. ಅಪೂರ್ವ
ಶಕ್ತಿ ಭಗವತ್ಪ್ರಸಾದದ ಫಲವಾಗಿ ಉಪಾ
ಪಾಲಿಗೆ ನಿತ್ಯ ನೆರವನ್ನು ನೀಡಿ ಭಗವನ್ನಿ
ಸಾಯುಜ್ಯದಲ್ಲಿ ಚೇತನನು ತನ್ನ ಸಹಜವಾದ
ಪೂರ್ಣಾನುಭವವನ್ನು ಪಡೆಯುತ್ತಾನೆ.
ಅನುಭವಕ್ಕೆ ಚ್ಯುತಿ ಸಂಭವಿಸುವುದಿಲ್ಲ. ಇದಕ್ಕಿ
ಬೇರೆಯಾದ ಅನುಭವ ತೋರಿ ಬರುವುದೂ
ಆದುದರಿಂದ ಚೇತನನಿಗೆ ಪರಮ ಪ್ರಾಪ್ಯವಾದ
ಸ್ವಕರ್ಮಾರ್ಜಿತ ಸರ್ವೇಶ್ವರ ಪ್ರಸಾದ
'ಅಪೂರ್ವ' ದ್ವಾರಾ ಉಪಲಬ್ಧ ನಿತ್ಯ ಅ
ಜ್ಞಾನಾನಂದ ಮಯವಾದ ಅವಸ್ಥೆಯ ಪ್ರಾ
ಆದರೆ ಇದೂ ಸಹಾ ಪೂರ್ವಮೀಮಾಂಸೆ
ದಂತೆ ಪೂರ್ವೋದಿತ ತಾತ್ಪರ್ಯಕ್ಕೆ ಹೊ
ಕೊಳ್ಳದ ಏಕದೇಶ ಪರಿಶೀಲನೆಯ ಪ
ಪರಿಣಾಮ. ಉಪನಿಷತ್ತುಗಳಲ್ಲಿ ಪರಬ್ರಹ್ಮ
ಸಂಬಂಧಪಟ್ಟ ಸಮಸ್ತ ಪದಾರ್ಥಗಳ ನಿರ್ದೇ
ಪ್ರಸಂಗದಲ್ಲಿ ಆ ವಸ್ತುಗಳೆಲ್ಲವೂ ವಿಭುವಾದ
ಬ್ರಹ್ಮನ ವೈಭವವನ್ನು ಪ್ರಕಟಿಸುವ ಪದಾ
ಗಳೆಂದು ಗೊತ್ತಾಗುತ್ತದೆ ಚೇತನನ ವಿ
ದಲ್ಲಿ ಪರಮಾತ್ಮನ ಸಂಬಂಧವನ್ನು ಉ
ಕೊಂಡೇ ಶಬ್ದಗಳು ಬಳಕೆಗೆ ಬಂದಿವೆ. ತಚ್ಛ
ತದಂಶ, ತದ್ವಿಭೂತಿ, ತಚ್ಛರೀರ, ತತ್
ಇತ್ಯಾದಿ ಶಬ್ದಗಳು ಚೇತನನಿಗೆ ಸಹಜ
ಈಶ್ವರ ಸಂಬಂಧವನ್ನು ತೋರಿಸುತ್ತವೆ.
ಮೇಲೆ "ತತ್ಸಾಮಾನಾಧಿಕರಣ್ಯಾಚ್ಚ" ಎ
ಹೇಳಿರುವಂತೆ ಸಾಮಾನ್ಯಾಧಿಕಾರಣ
ಸಂಬಂಧ ವಿಶೇಷ. ಅದು ಉತ್ತಮೋತ್ತ
ವಾದ ಸಂಬಂಧ. ಆ ಸಂಬಂಧವನ್ನು ನಿ
ಯಿಸಲು ಪ್ರಯತ್ನಿಸಿದ ವೇದಾಂತಿಗಳಲ್ಲಿ ಸ
ವನ್ನು ಗಮನಕ್ಕೆ ತೆಗೆದುಕೊಳ್ಳದೆ ನಿಂ
ಮಾಡುವ ಚತುರರು ಕುದೃಷ್ಟಿಗಳೆಂಬ ನಿಂ
ತುತ್ತಾಗುತ್ತಾರೆ. ಶಾಸ್ತ್ರದಲ್ಲಿ ವಿವಿಧ ಭಾಗ

(16ನೇ ಪುಟ ನೋ



ರಂಗಯ್ಯನವರು ಕಟ್ಟಿಸಿದ ಶ್ರೀ ಚೆನ್ನಕೇಶವ ದೇವಾಲಯ

# ಕೌತಾಳದ ಶ್ರೀರಂಗಯ್ಯನವರು

ರಂಗಸ್ವಾಮ್ಯಾಭಿಧಂ ವಂದೇ ಕೌತಾಳಪುರವಾಸಿನಂ ।
ವೈರಾಗ್ಯಭಾಗ್ಯಸಂಪನ್ನಂ ಭಕ್ತಾಭೀಷ್ಟಪ್ರದಾಯಕಮ್

ಕರ್ಮಭೂಮಿ ಎನಿಸಿದ ಈ ಭಾರತಾವನಿಯಲ್ಲಿ, ಸನಾತನ ಧರ್ಮದ ಜಾಗೃತಿಗಾಗಿ ಅನೇಕ ಮಹಿತಾತ್ಮರು ಅವತರಿಸಿರುವರು. ಈ ಪರಂಪರೆಯಲ್ಲಿ ಬಂದವರೇ ಶ್ರೀ ರಂಗಯ್ಯನವರು. ಇವರು ಕ್ರಿ.ಶ. 1687 ರ ಪ್ರಾಂತಪಲ್ಲಿ ಅಂಬಣ್ಣ ಲಕ್ಷ್ಮಕ್ಕ ದಂಪತಿಗಳಿಗೆ ಜನಿಸಿದರು. ಇವರ ಜನ್ಮಸ್ಥಳ ಕವಿತಾಳ (ಕೌತಾಳ). ಈ ಗ್ರಾಮವು ಕರ್ನೂಲು ಜಿಲ್ಲಾ ಆದವಾನಿ ತಾಲೂಕಿನಲ್ಲಿದೆ.

ಬಾಲ್ಯದಲ್ಲೇ "ಕೌಮಾರೇ ಆಚರೇತ್ಪ್ರಾಜ್ಞಃ ಧರ್ಮಾನ್ಭಾಗವತಾನಿಹ" ಎಂಬ ಪ್ರಹ್ಲಾದರ ಉಪದೇಶವನ್ನು ಅನುಷ್ಠಾನಕ್ಕೆ ತಂದ ಇವರು, ಜನಸಾಮಾನ್ಯರ ದೃಷ್ಟಿಯಲ್ಲಿ ಒಂದೂ ಅರಿಯದ ಮಂದರಂತೆ ಜೀವನ ನಡೆಸುತ್ತಾ, ಅಂತರಂಗದಿ ನಿರಂತರ ಶ್ರೀರಂಗನ ಪಾದಪದ್ಮಗಳನ್ನು ಚಿಂತಿಸುವ ಏಕಾಂತಭಕ್ತರಾಗಿದ್ದರು.

ಇವರ ಆರಾಧ್ಯದೈವ ವೆಂಕಟಾಚಲಪತಿ. ಜನ್ಮವಿತ್ತ ತಾಯಿಗೆ ಇದ್ದ ಸ್ಥಳದಲ್ಲೇ ಶ್ರೀನಿವಾಸನ ಬ್ರಹ್ಮೋತ್ಸವದ ವೈಭವವನ್ನು ತೋರಿದ ಮಹಿತಾತ್ಮರು ಇವರು. ದೀನ ದಲಿತರ ಪಾಲಿಗೆ ಇವರು ಪ್ರತ್ಯಕ್ಷ ದೈವವಾಗಿದ್ದರು. ನೀರಿಲ್ಲದೆ ಬಳಲುವ ಚಿರುತಾಪಲ್ಲಿ ಗ್ರಾಮದ ಜನರಿಗಾಗಿ ಆ ಊರಿನಲ್ಲಿ ಗಂಗೆಯನ್ನೇ ಹರಿಸಿದ ಕಡು ಕರುಣಾಮಯರು ಇವರು. ಹಾಫೀಜ್‌ಖಾನ್ ನವಾಬನ ಪ್ರಾರ್ಥನೆಯ ಮೇರೆಗೆ, ಕರ್ನೂಲು ಜಿಲ್ಲೆಯನ್ನು ಸಸ್ಯಶ್ಯಾಮಲವನ್ನಾಗಿಸಿದ ದಯಾಮಯರು ಇವರು.

ವೈರಾಗ್ಯ ಶಿಖಾಮಣಿಗಳಾದ ಇವರು ನವಾಬನು ಸಮರ್ಪಿಸಿದ ಸಂಪತ್ತಿನಿಂದ ಕವಿತಾಳದಲ್ಲಿ ಚೆನ್ನಕೇಶವ ದೇವಾಲಯವನ್ನು ನಿರ್ಮಿಸಿದರು. ಆಚಾರ್ಯ ಮಧ್ವರ ಪರಂಪರೆಗೆ ಸೇರಿದ ಶ್ರೀ ರಾಘವೇಂದ್ರ ಮಠಾಧೀಶರೆನಿಸಿದ ಶ್ರೀ ವಾದೀಂದ್ರರು ಹಾಗೂ ಶ್ರೀ ವಸುಧೇಂದ್ರರಂಥಾ ತಪೋನಿಧಿಗಳಿಂದ ಆದರಾಭಿಮಾನಗಳನ್ನು ಪಡೆದ ಧನ್ಯಜೀವಿಗಳು ಇವರು.

ಬ್ರಹ್ಮಚಾರಿಗಳಾದ ಇವರು ತಮ್ಮ 60 ನೇ ವರ್ಷ ವಯಸ್ಸಿನಲ್ಲಿ ವೈಕುಂಠಯಾತ್ರೆ ಮಾಡಿದರು. ಅಯ್ಯನವರ ಶಿಷ್ಯರು ಭಗವತ್ಸಂಕಲ್ಪಕ್ಕನುಗುಣವಾಗಿ ರಂಗಯ್ಯನವರ ಅವಶೇಷಗಳನ್ನು ಬೃಂದಾವನದಲ್ಲಿಟ್ಟು ಪ್ರತಿಷ್ಠಿಸಿದರು. ಇವರು ಇಂದಿಗೂ ಬೃಂದಾವನದಲ್ಲಿದ್ದು ಭಕ್ತಾಭೀಷ್ಟಪ್ರದರಾಗಿರುವರು.

—ಕೆ.ಎ.

ಕೌತಾಳದಲ್ಲಿ 1987 ರ ಮೇ 24, 25, 26 ರ ದಿನಗಳಲ್ಲಿ ತಿ ತಿ ದೇ ದಾಸಸಾಹಿತ್ಯ ಪ್ರಾಜೆಕ್ಟ್, ಶ್ರೀರಂಗಯ್ಯನವರ ಆರಾಧನೆಯನ್ನು ಏರ್ಪಡಿಸಿದೆ. ಹರಿಕಥೆ, ಉಪನ್ಯಾಸ ಕಾರ್ಯಕ್ರಮಗಳುಂಟು ಆ ನೆನಪಿನಲ್ಲಿ ಈ ಲೇಖನ. ಸಂ॥



ರಂಗಯ್ಯನವರು ಪ್ರತಿಷ್ಠಿಸಿ ಅರ್ಚಿಸಿದ ಶ್ರೀ ಚೆನ್ನಕೇಶವ.

(14ನೇ ಪುಟದಿಂದ)

ತೋರಿದರೆ ಶಾಸ್ತ್ರಜ್ಞನ ಕರ್ತವ್ಯ ಸಮನ್ವಯವೇ ಆಗುತ್ತದೆ. ಅಲ್ಲದೆ ತನಗೆ ಬೇಡವಾದ ಅಂಶದ ಪರಿತ್ಯಾಗಕ್ಕೆ ಆಸ್ಪದವಿಲ್ಲ. ''ಯಥಾರ್ಥಂ ಸರ್ವ ವಿಜ್ಞಾನಂ''. ಪಕ್ಷಪಾತಕ್ಕೆ ಎಳ್ಳಷ್ಟೂ ಎಡೆ ಇಲ್ಲ. ಸಾಮಾನಾಧಿಕರಣ್ಯದಲ್ಲಿ ಜಗದ್ಬ್ರಹ್ಮಗಳ ಸ್ವರೂಪೈಕ್ಯ ಏರ್ಪಡುತ್ತದೆ. ವೇದ ಕೇವಲ ಅಭೇದ ಶ್ರುತಿಯನ್ನು ಪುರಸ್ಕರಿಸಿಲ್ಲ. ತದ್ವಿರುದ್ಧವಾಗಿ ಭೇದಶ್ರುತಿಗಳು ಅನೇಕ ಕಾಣುತ್ತವೆ. ಅವುಗಳನ್ನು ಅಲಕ್ಷಿಸುವಂತಿಲ್ಲ. ಅಪಾತತಃ ಅವುಗಳಿಗೆ ವಿರೋಧ ತೋರುವುದರಿಂದ ಅನ್ಯತರ ತ್ಯಾಗ ಸ್ವೀಕಾರ ಮಾಡುವವರು ನಿಜವಾಗಿಯೂ ವೇದಾಂತಿಗಳಾದರೂ ವೇದ ಬಾಹ್ಯರಾಗುತ್ತಾರೆ. ಘಟಕಶ್ರುತಿ ಎಂಬ ಭಾಗದಿಂದ ವಿರೋಧನೀಗಿ ಸಮನ್ವಯ ಏರ್ಪಡುವುದರಿಂದ ಎಲ್ಲ ವೇದಾಂತ ಭಾಗಗಳೂ ಸುಸಂಗತವಾಗಿ ಸೇರಿಕೊಳ್ಳುತ್ತವೆ. ಈ ಸಾಂಗತ್ಯವೇ ಪರಬ್ರಹ್ಮನ ವೈಭವ. ಇದರ ಪ್ರಕಾರವಾಗಿ ಬ್ರಹ್ಮಸ್ವರೂಪವನ್ನು ಅವಲಂಬಿಸಿ ಅದಕ್ಕೆ ಸ್ವರೂಪತಃ, ಸ್ಥಿತಿತಃ, ಪ್ರವೃತ್ತಿತಃ, ಫಲತಶ್ಚ ಅಧೀನವಾಗಿ ಸಕಲ ಚರಾಚರ ವಸ್ತುಗಳು ಇರುವುದರಿಂದ ಪರಬ್ರಹ್ಮ ಪದಾ
ವಿಶೇಷಣ ವಿಶಿಷ್ಟವಾಗಿ ವಿಶೇಷಣಪೊಡನೆ ಕ
ಆ ಕೂಡಿಕೆ ನಿತ್ಯವಾಗಿ ಎಂದೆಂದೂ ಅದ್ವಿತಿ
ವಾಗಿ ವಿರಾಜಿಸುತ್ತದೆ. ಇದು ತತ್ತ್ವ ಸ್ವರು
ಯಾಮುನಾಚಾರ್ಯರು ಕಂಡದ್ದೆಂದು
ರಾಮಾನುಜಾಚಾರ್ಯರಿಂದ ಗೌರವಿಸಲ್ಪಟ್ಟಿ
ಬ್ರಹ್ಮಸೂತ್ರದಲ್ಲೂ ಇದೇ ಅಭಿಪ್ರಾಯವಾ
ರಿಂದ ವೃತ್ತಿಕಾರರ ಬೆಂಬಲವೂ ಲಭಿಸಿತು.

ಬ್ರಹ್ಮದ ಮಹಿಮೆ ಅದರ ಅನುವ
ಛಾಂದೋಗ್ಯದಲ್ಲಿ ನುಡಿದಿರುವಂತೆ ಪರಾಂಕ
ಗ್ರಂಥದಲ್ಲಿ ಸ್ವತಂತ್ರವಾಗಿ ತೋರಿಬಂದದ್ದ
ಇದು ವೇದಾಂತದ ಮರ್ಮವಾದುದ
ಉಭಯ ವೇದಾಂತವೆನಿಸಿಕೊಂ
ಪರಾಂಕುಶರಿಗೆ ಕುಲಪತಿ ಎಂಬ ನಿದಿ
ಏರ್ಪಟ್ಟಿತು. ಮತ್ತು ಜೀವಾತ್ಮನು ಸ್ವರೂ
ಪರತಂತ್ರನಾದುದರಿಂದ ಧರ್ಮರಕ್ಷಣೆ ಧ
ವಸ್ತುವಿನ ಹೊಣೆಯಾಗಿರುವುದರಿಂದ ಕಾರ
ಸ್ವಾಮಿತ್ವ ಎಂಬ ಪ್ರಧಾನ ಗುಣಗಳು ಭಗ
ನಲ್ಲಿ ಬಳಕೆಗೆ ಬರುತ್ತವೆ. ಚೇತನನಾದ
ಜ್ಞಾನಶೂನ್ಯವಾದ ಅಚಿದ್ವಸ್ತು ವಿಲಕ್ಷಣನ
ದರಿಂದ ತನ್ನ ಪರತಂತ್ರ ಸ್ವರೂಪಕ್ಕೆ ಅನು
ವಾಗಿ ''ಪೃಥಕ್‌ಸ್ಥಿತಿ'' ಎಂಬ ವಿಶೇಷ್ಯಭ
ವನ್ನು ತಾಳುವ ಸಂದರ್ಭಗಳಲ್ಲಿ ಅತಿಯ
ದುಃಖಪಡುತ್ತಾನೆ. ಸಂಸಾರಿ ಚೇತ
ಪ್ರಕೃತಿ ಸಂಸರ್ಗ ಹೇಗೆ ಅತ್ಯಂತ ಅಸಹ್ಯ
ಅದೇ ರೀತಿಯಲ್ಲಿ ಪರಮಾತ್ಮ ಪ್ರಕಾರ
ಚೇತನನಿಗೆ ಪೃಥಕ್ತ್ವವನ್ನು ಸಹಿಸಬಲ್ಲ ವಿಶ್ಲೇ
ದುಸ್ಸಹವಾಗುತ್ತದೆ. ಧರ್ಮವು ಸ್ವಧರ್ಮಿಯಿ
ಅಗಲಿದರೆ ಅದು ಧರ್ಮ ಆಗುವುದಿಲ್ಲ. ಅ
ಸ್ವರೂಪನಾಶವೇ ಸಹಜ. ಆದುದ
''ಅಪೃಥಕ್ ಸಿದ್ಧ ಧರ್ಮವು'' ಸ್ವಾಶ್ರಯ
ಬಿಡದೆ ಇರುವುದಕ್ಕೆ ಸದಾ ಯುಕ್ತಿಸೂ
''ಅನನ್ಯತ್ವಾತ್ ಧರ್ಮಧರ್ಮಿಣೋಃ ಭಾಸ್ಕರ
ಪ್ರಭಾಯಥಾ'' ಈ ಭಾಗ ಶಾರೀರಕ ಮೀಮಾ
ಯಲ್ಲಿ ತೋರುವುದರಿಂದ ಇದನ್ನು ಒಪ್ಪುವ
ಏಕದೇಶ ಮಾತ್ರ ತೃಪ್ತರಾಗಿ ನೇತ್ರದ್ವಯ
ವನ್ನು ಪಡೆಯದೆ ದುಃಖಸಾಗರದಲ್ಲಿ ವ
ಗುತ್ತಲೇ ಇರುತ್ತಾರೆ, ಎಂಬುದು ಪರಮ ವೈ
ಸಿದ್ಧಾಂತ ಸ್ಥಾಪಕರಾದ ಪರಾಂಕುಶ
ಯಾಮುನ ಮುನಿತ್ರಯ ಮಾರ್ಗಾಖ್ಯ
ಶ್ರೀ ರಾಮಾನುಜರ ನಿಷ್ಕೃಷ್ಟ ಅಭಿಪ್ರಾಯವೆಂ
ಇದನ್ನರಿಯದ ವಿದ್ವಾಂಸರು ರಾಮಾ
ಮುನಿತ್ರಯ ಸಂಪ್ರದಾಯವನ್ನು ಕೂರೇಶ
ಪ್ರಖ್ಯಾತಿಗೆ ಬಂದಿರುವುದನ್ನ ಲಕ್ಷಿಸುತ್ತಾರೆ.

★

## ಪ್ರಕಟನೆ

ತಿರುಮಲೆ ತಿರುಪತಿ ದೇವಸ್ಥಾನಗಳವರು, ತಿರುಮಲೆಗೆ ಹೋಗುವ ಘಾಟ್ ರಸ್ತೆಯಲ್ಲಿ ಕೆಟ್ಟುನಿಂತವಾಹನಗಳ ಅಗತ್ಯ ದುರಸ್ತಿಗಾಗಿ, ಸರಸವಾದ ದರಗಳಲ್ಲಿ ಕೆಲಸಮಾಡುವ ಒಂದು ಸಂಚಾರೀ ದುರಸ್ತಿ ವಾಹನವನ್ನು ಏರ್ಪಾಡು ಮಾಡಿರುತ್ತಾರೆ. ಈ ವಾಹನವು ಎಲ್ಲ ದಿನಗಳಲ್ಲೂ ಬೆಳಗ್ಗೆ 9 ಗಂಟೆಯಿಂದ ಸಂಜೆ 6 ಗಂಟೆಯವರೆಗೆ, ತಿರುಪತಿಯ ಅಲಿಪಿರಿ ಟೋಲ್ ಗೇಟಿನಲ್ಲಿಯಾಗಲೀ ಅಥವಾ ತಿರುಮಲೆಯ ಟೋಲ್‌ಗೇಟಿನಲ್ಲಿಯಾಗಲೀ ದೊರೆಯುವಂತೆ ಏರ್ಪಾಡು ಮಾಡಲಾಗಿದೆ. ಹಾಗಾಗಿ ತಮ್ಮ ವಾಹನಗಳನ್ನು ದುರಸ್ತಿ ಮಾಡಿಸಿಕೊಳ್ಳ ಬಯಸುವವರು ಮೇಲ್ಕಂಡ ಟೋಲ್‌ಗೇಟ್‌ಗಳಲ್ಲಿನ ಸಿಬ್ಬಂದಿಯನ್ನು ವಿಚಾರಿಸಿ ಈ ಸೇವಾಸದುಪಾಯದ ಅನುಕೂಲ ಪಡೆಯಬಹುದು.

—ತಿ. ತಿ. ದೇ.

## ಸಪ್ತಗಿರಿ ಯನ್ನು ಬೆಳೆಸಿರಿ

ಸನಾತನ ಧರ್ಮವನ್ನು ಹರಡಲು ಪರಿಶ್ರಮಿಸುತ್ತಿರುವ ಸಪ್ತಗಿರಿ ಮಾಸ ಪತ್ರಿಕೆ ಓದುಗರ ಸಂಪೂರ್ಣ ಸಹಕಾರದ ಅಗತ್ಯ ಹೊಂದಿದೆ. ನೀವು ಈ ಪತ್ರಿಕೆಯನ್ನು ನಿಮ್ಮ ಬಂಧುಗಳಿಗೆ, ಮಿತ್ರರಿಗೆ ನಿಮ್ಮ ಕಾಣಿಕೆಯಾಗಿ ನೀಡಬಹುದು. ಒಂದು ವರ್ಷದ ಚಂದಾ ಹಣವನ್ನು ನಮಗೆ ಕಳುಹಿಸಿ. ನಿಮ್ಮ ಪರವಾಗಿ ನೀವು ಹೆಸರಿಸುವವರಿಗೆ ಒಂದು ವರ್ಷ ಸಪ್ತಗಿರಿಯನ್ನು ಕಳುಹಿಸಲಾಗುತ್ತದೆ. ಕೆಳಗಣ ಕೂಪನ್ ಅನ್ನು ತುಂಬಿ ಹನ್ನೆರಡು ರೂಗಳ ಎಂ. ಓ., ಡಿ. ಡಿ. ಅನ್ನು ಕಳುಹಿಸಿರಿ.

ಮಾನ್ಯರೆ :

ಸಪ್ತಗಿರಿಯನ್ನು ಒಂದು ವರ್ಷ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿರಿ.
............ರೂಗಳ ಎಂ. ಓ/ ಡಿ. ಡಿ. ಕಳುಹಿಸಿದ್ದೇನೆ.

ಸಹಿ.

( ಬಿಡಿಬಿಡಿಯಾದ ದಪ್ಪ ಅಕ್ಷರದಲ್ಲಿ ಬರೆಯಿರಿ )

ಹೆಸರು ..................................................

ವಿಳಾಸ ..................................................

ಸಂಪಾದಕರು
ಸಪ್ತಗಿರಿ
ತಿ. ತಿ. ದೇ. ತಿರುಪತಿ.–ಇವರಿಗೆ.

# ಕನ್ನಡದಲ್ಲಿ ಶ್ರೀ ಗೋದಾದೇವಿ

ವಿಜಯನಗರದ ಅರಸರ ಕಾಲದಲ್ಲಿ ದಕ್ಷಿಣ ಭಾರತಾದ್ಯಂತ ಶ್ರೀ ವೈಷ್ಣವ ಧರ್ಮವು ರಾಜಾಶ್ರಯದ ಪರಿಣಾಮವಾಗಿ ಬಲವಾದ ಪ್ರಚೋದನೆಯನ್ನು ಪಡೆಯಿತು.

ಈ ಅರಸರಲ್ಲೆಲ್ಲ ಅತ್ಯಂತ ಪ್ರಖ್ಯಾತನಾದ ಶ್ರೀ ಕೃಷ್ಣದೇವರಾಯನು ವಿಷ್ಣುಚಿತ್ತೀಯ ಎಂದು ಕರೆಯಲ್ಪಡುವ 'ಆಮುಕ್ತಮಾಲ್ಯದ' ಎನ್ನುವ ಕಾವ್ಯವನ್ನು ತೆಲುಗಿನಲ್ಲಿ ರಚಿಸಿದ. ಇದು ಸಂಸ್ಕೃತ ಮೂಲದ ತೆಲುಗು ಅನುವಾದ. 'ಶೂಡಿ ಕುಡುತ್ತ ನಾಚ್ಚಿಯಾರ್'' ಆಗಿರುವ ಗೋದಾದೇವಿಯ ಕಥೆಯಾಗಿದೆ ಇದು.

ಶ್ರೀ ರಾಮಾನುಜರು ಕರ್ನಾಟಕಕ್ಕೆ ಬಂದು ಹೋದಾಗಲಿಂದ (ಕ್ರಿ. ಶ. 1138–1150) ಹಿಡಿದು ಒಡೆಯರ ಕಾಲದ ಚಿಕದೇವರಾಜ ಒಡೆಯರ (ಕ್ರಿ. ಶ. 1672–1704) ವರೆಗೆ ಸುಮಾರು ಐದು ಶತಮಾನಗಳವರೆಗೆ ವಿಶಿಷ್ಟಾದ್ವೈತ ತತ್ತ್ವವು ಕನ್ನಡ ಭಾಷೆಯ ಮೇಲೆ ಯಾವುದೇ ಪ್ರಭಾವವನ್ನು ಬೀರಲಿಲ್ಲವೆಂದರೆ, ಆ ಧರ್ಮದ ಬಗ್ಗೆ ಕನ್ನಡದಲ್ಲಿ ಯಾವುದೇ ಕೃತಿಯೂ ರಚನೆಯಾಗಲಿಲ್ಲವೆಂದರೆ, ಅಚ್ಚರಿಯಾಗುವುದು.

ಬಹುಶಃ ರಾಮಾನುಜರ ನಿರ್ಗಮನದ ನಂತರ ಶ್ರೀ ವೈಷ್ಣವ ಧರ್ಮಾಭಿಮಾನಿಗಳು (ಇವರಲ್ಲಿ ಕೆಲವರು ಇಲ್ಲಿನವರು, ಉಳಿದವರು ತಮಿಳುನಾಡಿನಿಂದ ವಲಸೆ ಬಂದು, ಇಲ್ಲಿ ಶಾಶ್ವತವಾಗಿ ನೆಲೆಸಿದ್ದವರಾದುದರಿಂದ) ನಾಲಾಯಿರ ದಿವ್ಯಪ್ರಬಂಧ ಪಠನ, ದೇವಾಲಯಗಳ ಪೂಜೆ ಇತ್ಯಾದಿ ಉನ್ನತ ಮಟ್ಟದಲ್ಲಿ ಇದ್ದು, ಸಾಮಾನ್ಯ ಪ್ರಜೆಗಳ ಮಟ್ಟವನ್ನು ತಲುಪಲು ಇವರುಗಳು ಪ್ರಯತ್ನಿಸಲಿಲ್ಲವೆಂದು ಕಾಣುತ್ತದೆ. ಅಥವಾ ಅದರ ಅಗತ್ಯವೂ ಅವರಿಗೆ ಕಂಡುಬರಲಿಲ್ಲವೊ ಏನೊ !

ಮೈಸೂರಿನ ಒಡೆಯರುಗಳು ಎಲ್ಲ ಧರ್ಮಗಳ ಆಶ್ರಯದಾತರಾಗಿದ್ದಂತೆ, ಶ್ರೀ ವೈಷ್ಣವ ಧರ್ಮದ ಅನುಯಾಯಿಗಳಾಗಿದ್ದರು. ಮುಖ್ಯತಃ, ಚಿಕದೇವರಾಜ ಒಡೆಯರು ಮತ್ತು ಮುಮ್ಮಡಿ ಕೃಷ್ಣರಾಜ ಒಡೆಯರವರುಗಳು ಈ ಧರ್ಮದ ಅಭಿಮಾನಿಗಳಾಗಿದ್ದರು. ಇವರ ಆಶ್ರಯದಲ್ಲಿದ್ದ ಅನೇಕ ವಿದ್ವಾಂಸರುಗಳು, ಕವಿಗಳು ಶ್ರೀ ವೈಷ್ಣವರಾಗಿದ್ದರು. ಇವರುಗಳಲ್ಲಿ ಚಿಕದೇವರಾಜ ಒಡೆಯರ ಆಸ್ಥಾನ ಕವಿ ಹಾಗೂ ಮಂತ್ರಿಯಾಗಿದ್ದ ಚಿಕುಪಾಧ್ಯನು ಬಹಳ ಮುಖ್ಯನಾದವನು.

---

**'ರಘುಸುತ'**

---



# ಶ್ರೀ ವೆಂಕಟೇಶ್ವರಸ್ವಾಮಿದೇವಾಲಯ ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ದತ್ತಿಯನ್ನು ನೀಡ ಬಯಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಅರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿ ಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ.

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ;

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ. ದೇ., ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟನ್ನೇ ಕಳುಹಿಸಬೇಕು. ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗಧಿ ಆಗಿರುವ ದತ್ತಿಯ ಮೌಲ್ಯ ರೂ: 3 ಲಕ್ಷ. ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರುವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಅರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ

  (2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು (ಒಂದುಬಾರಿಗೆ 10% ದಂತೆ). ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ.ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ

ಬರೆಯಿರಿ:

**ಕಾರ್ಯನಿರ್ವಹಣಾಧಿಕಾರಿ**

ತಿ. ತಿ. ದೇ. ತಿರುಪತಿ.

ಚಿಕದೇವರಾಜ ಒಡೆಯರು ಕನ್ನಡಾಭಿಮಾನಿಗಳು. ಅವರು ಶ್ರೀ ವೈಷ್ಣವ ತತ್ತ್ವಗಳನ್ನು ಕನ್ನಡದಲ್ಲಿ ಮೂಡಿಸಬೇಕೆಂದು ಪ್ರಯತ್ನಿಸಿದರು. ನಾಲಾಯಿರ ದಿವ್ಯಪ್ರಬಂಧಗಳನ್ನು ಅನುವಾದ ಮಾಡಿಸಲು ಪ್ರಯತ್ನಗಳನ್ನು ಮಾಡಿದರು. ಆದರೆ ಮಡಿವಂತ ಆಸ್ತಿಕ ಮಹನೀಯರ ಅಪಾರ ಪ್ರತಿಭಟನೆಯ ಪರಿಣಾಮವಾಗಿ ಅವರು ಇದನ್ನು ಕೈಬಿಟ್ಟರು. ಆದರೂ ಅವರಿಗೆ ಶ್ರೀ ವೈಷ್ಣವ ಧರ್ಮದ ಬಗ್ಗೆ ಅಭಿಮಾನ ಕಡಿಮೆಯಾಗಲಿಲ್ಲ. ಆಗಿನ ಅಳಸಿಂಗರಾರ್ಯರ ಕೃಪಾವೈಭವಕ್ಕೆ ಪಾತ್ರರಾದ ಸಂಚಿಯ ಹೊನ್ನಮ್ಮನು ಶ್ರೀ ವೈಷ್ಣವ ಧರ್ಮವನ್ನು ಪ್ರತಿಪಾದಿಸುವ ಹದಿಬದೆಯ ಧರ್ಮ ಎನ್ನುವ ಗ್ರಂಥ ರಚನೆಗೆ ಪ್ರೋತ್ಸಾಹ ನೀಡಿದರು. ಅಂತೆಯೇ ಚಿಕುಪಾಧ್ಯಾಯನ ಮುಖಾಂತರ ಸಂಸ್ಕೃತದ 'ದಿವ್ಯಸೂರಿ ಚರಿತೆ' ಯನ್ನು ಕನ್ನಡಕ್ಕೆ ಅನುವಾದಿಸಲು ಪ್ರೋತ್ಸಾಹಿಸಿದರು.

ಆಳ್ವಾರರುಗಳ ಜೀವನ ಚರಿತ್ರೆಗಾಗಿ ಕೆಲವೊಂದು ಸಂಸ್ಕೃತ ಹಾಗೂ ತಮಿಳು ಗ್ರಂಥಗಳನ್ನು ಪರಾಮರ್ಶಿಸಬೇಕಾಗಿದ್ದರೂನು ಕ್ರಿ. ಶ. 12 ನೇ ಶತಮಾನದಲ್ಲಿ ರಚಿತವಾದ ಸಂಸ್ಕೃತದಲ್ಲಿನ 'ದಿವ್ಯ ಸೂರಿ ಚರಿತ'ವು ಅನೇಕರಿಗೆ ಸ್ಫೂರ್ತಿದಾಯಕ.

ಆಳ್ವಾರರುಗಳ ಹಾಗೂ ಆಚಾರ್ಯರುಗಳ ಎಲ್ಲ ರೀತಿಯ, ಮುಖ್ಯವಾಗಿ ತಾತ್ತ್ವಿಕ ಹಾಗೂ ಧಾರ್ಮಿಕ ಸಾಧನೆಗಳನ್ನು ಈ ಕೃತಿಯು ವಿವರಿಸುತ್ತದೆ. ಆದರೆ ಈ ಕೃತಿಯಲ್ಲಿನ ಒಂದು ವಿಶೇಷವೆಂದರೆ ಮೇಲೆ ತಿಳಿಸಿದ ಎಲ್ಲರಿಗಿಂತಲೂ ಗೋದಾದೇವಿಯ (ಆಂಡಾಳ್‌ರವರ) ಜೀವನ ಚರಿತ್ರೆಯ ವಿವರಗಳನ್ನು ಹೆಚ್ಚು ವಿಶದವಾಗಿ ಇಲ್ಲಿ ಚಿತ್ರಿಸಲಾಗಿದೆ.

ಅನಂತ ಸೂರಿಯವರ 'ಪ್ರಪನ್ನಾಮೃತಂ' ಕೃತಿಯು ನಂತರದ ಕಾಲದಲ್ಲಿ ರಚಿತವಾಗಿದ್ದರೂ ಕೂಡ, ಮೇಲೆ ತಿಳಿಸಿದ ದಿವ್ಯ ಸೂರಿ ಚರಿತದಿಂದಲೇ ಹೆಚ್ಚು ವಿಷಯಗಳನ್ನು ಸಂಗ್ರಹಿಸಿದೆ.

ಪಿಣ್‌ಬಳಹಿಯ ಪೆರುಮಾಳ್ ಜೀಯರ್ ಮತ್ತು ಮೈಸೂರಿನ ಪರಕಾಲ ಮಠದ ಶ್ರೀ ಶ್ರೀ ಶ್ರೀ ಮೂರನೇ ಬ್ರಹ್ಮತಂತ್ರ ಸ್ವತಂತ್ರಸ್ವಾಮಿಗಳು ರಚಿಸರುವ 'ಗುರು ಪರಂಪರಾ ಪ್ರಭಾವ'ಗಳು ಮೇಲೆ ತಿಳಿಸಿರುವ ಸಂಸ್ಕೃತ ಗ್ರಂಥಗಳ ಸಂಗ್ರಹ ರೂಪವಾಗಿದೆ.

ಅಂತೆಯೇ ಆಗಿನ ಕಾಲಕ್ಕೆ ಲಭ್ಯವಿರುವ ಎಲ್ಲ ಸಂಸ್ಕೃತ ಹಾಗೂ ತಮಿಳು ಗ್ರಂಥಗಳಿಂದ ಸ್ಫೂರ್ತಿ ಪಡೆದು ವಿಷಯ ಸಂಗ್ರಹಿಸಿ, ಚಿಕುಪಾಧ್ಯಾಯನು 'ದಿವ್ಯ ಸೂರಿ ಚರಿತ' ಎನ್ನುವ ಚಂಪೂಕಾವ್ಯವನ್ನು ರಚಿಸಿದನು. ಇದು ಆಂಡಾಳ್ ಜೀವನ ಚರಿತ್ರೆಯನ್ನು ತಿಳಿಸುವ, ವಿವರಿಸುವ ಏಕನೇವ ಕನ್ನಡದ ಕೃತಿಯಾಗಿದೆ

ಚಿಕುಪಾಧ್ಯಾಯನು 300 ಕ್ಕು ಹೆಚ್ಚು ಕೃತಿಗಳನ್ನು ರಚಿಸಿದ್ದಾನೆ. ಇಷ್ಟೊಂದು ಕೃತಿಗಳನ್ನು ಕನ್ನಡ ಸಾಹಿತ್ಯದ ಯಾವ ಕೃತಿಕಾರನೂ ರಚಿಸಿಲ್ಲವೆಂದರೆ ಆಶ್ಚರಿಯವಾಗುತ್ತದೆ. ಈ ಕೃತಿಗಳಲ್ಲಿ ಸುಮಾರು 30 ಕ್ಕೂ ಹೆಚ್ಚು ಗ್ರಂಥಗಳು ವಿಶಿಷ್ಟಾದ್ವೈತಕ್ಕೆ, ಶ್ರೀ ವೈಷ್ಣವ ಸಾಹಿತ್ಯಕ್ಕೆ, ಜೀವನ ಚರಿತ್ರೆಗಳಿಗೆ ಸಂಬಂಧಪಟ್ಟವುಗಳಾಗಿರುವುದರಿಂದ ಇವನನ್ನು ವಿಶಿಷ್ಟಾದ್ವೈತದ ವಿಶ್ವಕೋಶ ಎಂದು ಕರೆಯಲಾಗುತ್ತದೆ.

ಧಾರ್ಮಿಕ ರೀತಿ ನೀತಿಗಳಲ್ಲಿ ಇವನು ಎಷ್ಟು ಖ್ಯಾತನೋ ರಾಜ್ಯಭಾರದ, ಆಡಳಿತ ರಂಗಗಳಲ್ಲೂ ಅಷ್ಟೇ ಖ್ಯಾತನಾಗಿದ್ದು ಬಹಳ ಕಾಲದವರೆಗೆ ಪ್ರಭಾವಶಾಲಿಯಾಗಿದ್ದನು.

ಚಿಕುಪಾಧ್ಯಾಯನ ನಿಜವಾದ ಹೆಸರು ಯಾರಿಗೂ ಗೊತ್ತಿಲ್ಲ. ಆದರೆ ಈತನ 'ದಿವ್ಯ ಸೂರಿ ಚರಿತ್ರೆ'ಯ ಗ್ರಂಥದಿಂದ ಈತನ ತಂದೆಯು ರಂಗಾಚಾರ್ಯನೆಂದೂ ಮತ್ತು ಈತನು ಪುರುಕುತ್ಸ ಗೋತ್ರಕ್ಕೆ ಸೇರಿದವನೆಂದೂ ತಿಳಿದು ಬರುತ್ತದೆ.

ಚಿಕದೇವರಾಜ ಒಡೆಯರ ಆಜ್ಞಾನುಸಾರ ಕ್ರಿ. ಶ. 1678–79 ರಲ್ಲಿ ಚಿಕುಪಾಧ್ಯಾಯನು ದಿವ್ಯಸೂರಿ ಚರಿತವನ್ನು ಬರೆದು ಮುಗಿಸಿದನು.

ಈ ಚಂಪೂವಿನಲ್ಲಿ 14 ಆಶ್ವಾಸಗಳಿದ್ದು, ಆರನೆಯ ಆಶ್ವಾಸದಲ್ಲಿ ಶ್ರೀ ಆಂಡಾಳರ ಜೀವನವು ಚಿತ್ರಿತವಾಗಿದೆ. ಇದರಲ್ಲಿ 62 ಪದ್ಯಗಳಿವೆ. ತುಂಬಾ ವಿವರವಾದ ಈ ಆಂಡಾಳ್ ಚರಿತ್ರೆಯಲ್ಲಿ ಆಕೆಯ ಜೀವನವೈಭವವನ್ನು ಬಹಳ ಸುಂದರವಾಗಿ ಕವಿ ಚಿತ್ರಿಸಿದ್ದಾನೆ.

ಶ್ರೀವಿಲ್ಲಿಪುತ್ತೂರಿನ ವೇದಪ್ಪಿರಾನ್ ವಂಶದಲ್ಲಿ ಹುಟ್ಟಿದ ಭಟ್ಟನಾಥ (ಪೆರಿಯಾಳ್ವಾರ್‌ರವರು) ವಟಪತ್ರಶಾಯಿಯ ಸೇವೆಯಲ್ಲಿ ಸದಾ ನಿರತರಾಗಿರುತ್ತಿದ್ದರು. ಪ್ರತಿನಿತ್ಯವೂ ಇವರು ದೇವರಿಗೆ ಪುಷ್ಪಮಾಲಿಕೆಯನ್ನು ಅರ್ಪಿಸುತ್ತಿದ್ದರು.

ಒಂದು ದಿನ ಇವರಿಗೆ ಉದ್ಯಾನವನದಲ್ಲಿ ಸುಂದರ ಶಿಶುವೊಂದು ದೊರೆಯಿತು. ಇದನ್ನು ಅವರು ಭೂದೇವಿಯ ಪ್ರಸಾದ, ಭೂದೇವಿಯ ಅವತಾರವೆಂದೇ ತಿಳಿದರು.

ಈ ಭಟ್ಟನಾಥರು ಮುಂದೆ ಪಾಂಡ್ಯರಾಜನ ರಾಜಧಾನಿಯಲ್ಲಿ ತಾತ್ತ್ವಿಕ ಉಪನ್ಯಾಸಗಳನ್ನು ನೀಡುತ್ತಿದ್ದುದೇ ಅಲ್ಲದೆ ತಿರುಪ್ಪಲ್ಲಾಂಡು ಹಾಗೂ ತಿರುಮೊಳಿಗಳನ್ನೂ ರಚಿಸಿದರು ಎಂಬುದಾಗಿ ದಿವ್ಯಸೂರಿ ಚರಿತವು ತಿಳಿಸುತ್ತದೆ.

ಪೆರಿಯಾಳ್ವಾರ್‌ರವರು ತಮಗೆ ದೊರೆತ ಶಿಶುವನ್ನು ಪ್ರೀತ್ಯಾದರಗಳಿಂದ ಸಾಕಿದುದು, ಅವಳು ಯೌವನವತಿಯಾದ ಮೇಲೆ ಶೂಡಿಕ್ಕುಡುತ್ತಾಳ್ ಆದುದು, ತಂದೆ ಆಕೆಗೆ ಮದುವೆ ಮಾಡಲು ಮಾಡಿದ ಪ್ರಯತ್ನ, ನೂರೆಂಟು ದಿವ್ಯಕ್ಷೇತ್ರಗಳ ವರ್ಣನೆ, ಆಕೆಯು ಶ್ರೀ ರಂಗನಾಥನನ್ನು ಮದುವೆಯಾಗಲು ತೀರ್ಮಾನಿಸಿದುದು, ಭಕ್ತಾದಿಗಳ ಎದುರಿಗೇನೆ ಗರ್ಭಗುಡಿಯಲ್ಲಿನ ರಂಗನಾಥನ ಪಾದಗಳನ್ನು ಸೇರಿ ಕಣ್ಮರೆಯಾದುದು, ಪೆರಿಯಾಳ್ವಾರ್‌ರವರು ಶ್ರೀ ವಿ ಲ್ಲಿ ಪು ತ್ತೂ ರಿ ಗೆ ಹಿಂತಿರುಗಿದುದು– ಈ ಎಲ್ಲ ವಿವರಗಳನ್ನೂ ಕಣ್ಣಿಗೆ ಕಟ್ಟುವಂತೆ ವರ್ಣಿಸಲಾಗಿದೆ.

ನಂತರ ಈ ಶತಮಾನದ ಪ್ರಾರಂಭದವರೆವಿಗೆ ಆಂಡಾಳ್‌ರವರ ಬಗ್ಗೆ ಯಾವುದೇ ಸಾಹಿತ್ಯ ಸೃಷ್ಟಿಯಾಗದೆ ಇರುವುದು ಆಶ್ಚರ್ಯವಾಗಿದೆ. ಆಕೆಯ ಜೀವನ ಚರಿತ್ರೆಯಾಗಲಿ, ಆಕೆಯ ಕೃತಿಗಳ ಬಗೆಗಾಗಲಿ ಕನ್ನಡದಲ್ಲಿ ಯಾವುದೇ ಒಂದು ಪುಸ್ತಕವೂ ನಿರ್ಮಾಣವಾಗಲಿಲ್ಲ.

ಕಳೆದ 60 ವರ್ಷಗಳಲ್ಲಿ ಆಂಡಾಳ್‌ರವರನ್ನು ಕುರಿತಾದ ಸಾಹಿತ್ಯ ನಿರ್ಮಾಣವು ಅದ್ಭುತ ರೀತಿಯಲ್ಲಿ ನಿರ್ಮಾಣವಾಗಿದೆ. ಇದನ್ನು ಪರೀಕ್ಷಿಸಿ ನೋಡಿದಲ್ಲಿ ಕನ್ನಡದ ಓದುಗರಿಗೆ ಆಂಡಾಳ್‌ರವರ ಕೃತಿಗಳನ್ನು ನೀಡಬೇಕೆಂಬ ಉತ್ಕಟೇಚ್ಛೆ ಕನ್ನಡದ ಲೇಖಕರಲ್ಲಿ ಹೃದಯದಲ್ಲಿರುವುದನ್ನು ನಾವು



# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ(ವೈಕುಂಠ) ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.

* ಸರತಿಯ ಸಾಲಿನ ಕೋಣೆಗಳಲ್ಲಿ ಅಲ್ಪಾಹಾರ ಸೌಲಭ್ಯ.

ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯುವರಿಂದ ಶುದ್ಧ ಹಾಲಿನ ಮಾರಾಟ.

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7-ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ. ಗೋವಿಂದ ಪ್ರಸಾದ ಕ್ಯಾಂಟೀನ್,

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ. ಹಾಗೂ ಉಚಿತ ಬಸ್ ಸೌಕರ್ಯ

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.

* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಸೂಚನೆ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8-30 ಗಂಟೆಯವರೆಗೆ ಕೆಲಸಮಾಡುತ್ತದೆ, ಜೊತೆಗೆ ಪ್ರಧಾನ ಅಂಚೆ ಕಚೇರಿಯು ರಾತ್ರಿ 10–30 ರಿಂದ 1–00 ಗಂಟೆಯವರೆಗೆ ಕೆಲಸಮಾಡುತ್ತದೆ.

ಗಮನಿಸಬಹುದು ಒಮ್ಮೆ ಇಂತಹ ಕೃತಿಗಳು ಸಾಮಾನ್ಯ ಓದುಗನಿಗೆ ಮುಟ್ಟುವಂತಿದ್ದರೂ, ಇನ್ನು ಕೆಲವು ತಾತ್ತ್ವಿಕ ಪರಮಾವಧಿಯನ್ನು ಮುಟ್ಟಿವೆ. ಇಂತಹ ತಾತ್ತ್ವಿಕ ಹಿನ್ನೆಲೆಯ ಕೃತಿಗಳು ಸಾಮಾನ್ಯ ಓದುಗನಿಗೆ ಕಬ್ಬಿಣದ ಕಡಲೆಯಂತಿದ್ದರೂ ಲೇಖಕರು ಶ್ರಮವಹಿಸಿ ನಿರ್ಮಿಸಿರುವ ಸಾಹಿತ್ಯ ಶ್ರೀಯು ಅನುಪಮ ಮಟ್ಟವನ್ನು ಮುಟ್ಟಿದೆ. ಕನ್ನಡ ಸಾಹಿತ್ಯಕ್ಕೆ ಗೌರವ ತರುವಂತಿದೆ. ಇಂತಹ ಪಾಂಡಿತ್ಯ ಪೂರ್ಣ ಕೃತಿಗಳು ನಿರ್ಮಾಣವಾದುದಕ್ಕೆ ನಾವು ಹೆಮ್ಮೆ ಪಟ್ಟುಕೊಳ್ಳಬೇಕಾಗಿದೆ.

ಕನ್ನಡದಲ್ಲಿ ದೊರೆಯುವ ಆಂಡಾಳ್‌ರವರ ಸಾಹಿತ್ಯವನ್ನು ನಾವು ಮೂರು ಭಾಗಗಳಾಗಿ ವಿಭಾಗಿಸಬಹುದು.

1. ಆಳ್ವಾರರುಗಳ ಜೀವನ ಚರಿತ್ರೆಯ ನಡುವೆ ಕಾಣಿಸಿಕೊಂಡಿರುವ ಆಂಡಾಳ್ ಜೀವನ ಚರಿತ್ರೆ.

2 ಆಂಡಾಳ್ ಕೃತಿಗಳ ಬಗೆಗೆ ಕೃತಿ ರಚನೆ.

3. ಇತರೆ

## ಆಳ್ವಾರರುಗಳ ಜೀವನ ಚರಿತ್ರೆಯ ನಡುವೆ ಕಾಣಿಸಿಕೊಂಡಿರುವ ಆಂಡಾಳ್ ಜೀವನ ಚರಿತ್ರೆ

ಆಳ್ವಾರರುಗಳ ಜೀವನ ಚರಿತ್ರೆಯ ಕೆಲವು ಕೃತಿಗಳು ಕನ್ನಡದಲ್ಲಿ ಬಂದಿವೆ. ಅವುಗಳಲ್ಲಿ ಆಂಡಾಳ್ ಜೀವನ ಚರಿತ್ರೆಯೂ ಬಂದಿದೆ.

ಇವುಗಳಲ್ಲಿ ಮೊಟ್ಟಮೊದಲನೆಯದು ಪ್ರೊ॥ ಎಂ. ಯಾಮುನಾಚಾರ್ಯರ 'ಆಳ್ವಾರರುಗಳು' ಎನ್ನುವ ಪುಟ್ಟ ಕೃತಿ. ಇದನ್ನು 1942 ರಲ್ಲಿ ಮೈಸೂರು ವಿಶ್ವವಿದ್ಯಾನಿಲಯವು] ಪ್ರಕಟಿಸಿದೆ. ಇದರಲ್ಲಿ ರೂಪಿಸಿರುವ ಆಂಡಾಳ್ ಜೀವನ ಚರಿತ್ರೆಯು ಪುಟ್ಟದಾಗಿದ್ದು ಸಿಹಿಯಾಗಿದೆ.

ಶ್ರೀ ಮುಡುಂಬೈ ರಾಮಾನುಜಯ್ಯಂಗಾರ್ ರವರು 1961ರಲ್ಲಿ ಪ್ರಕಟಿಸಿದ 'ಶ್ರೀ ವೈಷ್ಣವ ಸುಧಾನಿಧಿ' ಎನ್ನುವ ಗ್ರಂಥದಲ್ಲಿ ಶ್ರೀ ಗೋದಾದೇವಿಯ ಜೀವನ ಚರಿತ್ರೆಯನ್ನು ಸೂಕ್ಷ್ಮವಾಗಿ ಚಿತ್ರಿಸಲಾಗಿದೆ.

ಇದೇ ರೀತಿಯಲ್ಲಿ ಎಚ್ಚೆಸ್ಕೆಯವರ 'ಶ್ರೀ ರಾಮಾನುಜ', ಹೆಚ್. ಜೆ. ರಾಮಯ್ಯಂಗಾರ್ ರವರ 'ಶ್ರೀ ರಾಮಾನುಜ ಸಿದ್ಧಾಂತ ದರ್ಪಣ', ಡಾ॥ ಎಸ್. ಎಸ್. ಅನಂತರಂಗಾಚಾರ್‌ರವರ 'ಶ್ರೀ ರಾಮಾನುಜ ದರ್ಶನಂ' ಗ್ರಂಥಗಳಲ್ಲಿ ಸಾಮಾನ್ಯ ಹಂದರದ ಆಂಡಾಳ್ ಚಿತ್ರಣವಿದೆ.

ಆದರೆ ಡಿ. ಕೃಷ್ಣಯ್ಯಂಗಾರ್‌ರವರ 'ಆಳ್ವಾರರ ದಿವ್ಯ ಜೀವನ' ಎಂಬ ಪುಸ್ತಕದಲ್ಲಿ ಆಂಡಾಳ್ ರವರ ವಿಸ್ತೃತ ಜೀವನ ಚರಿತ್ರೆಯೇ ಅಲ್ಲದೆ ತಿರುಪ್ಪಾವೈನ ಪಾಶುರಗಳೂ ಮತ್ತು ಅವುಗಳ ಕನ್ನಡ ಅನುವಾದ ಹಾಗೂ ನಾಚ್ಚಿಯಾರ್ ತಿರುಮೊಳಿಯ ಸಂಕ್ಷಿಪ್ತ ಸಾರಾಂಶವನ್ನೂ ನೀಡಲಾಗಿದೆ.

ಹೆಚ್. ಜೆ. ರಾಮಯ್ಯಂಗಾರ್ ರವರ 'ಶ್ರೀ ಆಂಡಾಳ್ ಆಳ್ವಾರ್' ಎನ್ನುವ ಪುಟ್ಟ ಪುಸ್ತಕದಲ್ಲಿ ಆಂಡಾಳ್ ರವರ ಕಿರು ಪರಿಚಯವನ್ನು ಕೊಡುವುದರೊಂದಿಗೆ ಗೋದಾಸ್ತುತಿಯನ್ನೂ ನೀಡಲಾಗಿದೆ.

ಡಾ॥ ಎಸ್. ಎಸ್. ಅನಂತ ರಂಗಾಚಾರ್ ರವರ 'ಆಳ್ವಾರುಗಳ ಕೃತಿ ಪರಿಚಯ'ದಲ್ಲಿ ಬಹಳ ವಿಸ್ತೃತ ರೂಪದ ಆಂಡಾಳ್ ರವರ ಜೀವನ ಚರಿತ್ರೆ ಇರುವುದೇ ಅಲ್ಲದೆ ಆಕೆಯ ಸಾಹಿತ್ಯ ಕೃತಿಗಳಾದ ತಿರುಪ್ಪಾವೈ ಹಾಗೂ ನಾಚ್ಚಿಯಾರ್ ತಿರುಮೊಳಿಗಳಿಂದ ಆಯ್ದ ಉತ್ತಮ ಕವನಗಳು ಹಾಗೂ ಅವುಗಳ ಕನ್ನಡ ಅನುವಾದಗಳೂ ಇದ್ದು, ನಾವು ಆನಂದಭೂಯಿಷ್ಠವಾದ ಸ್ವತಂತ್ರ ಕನ್ನಡ ಕೃತಿಯನ್ನು ಓದುತ್ತಿದ್ದೇವೆಯೊ ಎನ್ನುವಂತಾಗುತ್ತದೆ.

ಸವ್ಯಸಾಚಿಯವರ 'ಆಂಡಾಳ್' ಎನ್ನುವುದು ಮಕ್ಕಳಿಗಾಗಿ ಬರೆದ ಪೂರ್ಣರೂಪದ ಜೀವನ ಚರಿತ್ರೆ. ಅಂತೆಯೇ ಜಿ. ಪಿ. ರಾಜರತ್ನಂ ರವರ 'ಆಳ್ವಾರ್‌ಗಳ ಕಥೆಗಳು' ಎನ್ನುವುದರಲ್ಲೂ ಮಕ್ಕಳ ದೃಷ್ಟಿಯಿಂದ ಬರೆದ ಆಂಡಾಳ್‌ರವರ ಜೀವನ ಚರಿತ್ರೆ ಇದೆ.

ಬಿ. ಎಸ್. ಎಸ್. ಕೌಶಿಕರವರ 'ಶ್ರೀಮದಾಂಡಳ್ ವೈಭವಂ' ಎನ್ನುವುದು ನಾಟಕ ರೂಪದಲ್ಲಿರುವ ಒಂದು ಕೃತಿ.

ಈ ದೃಷ್ಟಿಯಿಂದ ಬರದದ್ದೆ ಮಾಸ್ತಿಯವರ ಶ್ರೀವೈಷ್ಣವ ಸಂತರು ಹಾಗೂ ವಿಮರ್ಶೆ 4 ಎನ್ನುವ ಕೃತಿಗಳು.

ಮಂಡ್ಯದಲ್ಲಿರುವ ಶ್ರೀದೇವಿಯವರು ರಚಿಸಿರುವ 'ಶ್ರೀ ಗೋದಾ ಶ್ರೀ ಸೂಕ್ತಿ ಮಂಜರಿ' ಎನ್ನುವ ಕೃತಿಯು ಮೇಲೆ ತಿಳಿಸಿರುವ ಎಲ್ಲ ಕೃತಿಗಳಿಗಿಂತಲೂ ಭಿನ್ನವಾದುದು. ಇದರಲ್ಲಿಯೂ ಆಂಡಾಳ್ ರವರ ಕಿರು ಪ್ರಮಾಣದ ಜೀವನ ಚರಿತ್ರೆ ಇದೆ.



## ಆಂಡಾಳ್ ಕೃತಿಗಳ ಬಗೆಗೆ ಕೃತಿ ರಚನೆ

ಆಂಡಾಳ್ ಎರಡು ಕೃತಿಗಳನ್ನು ರಚಿಸಿದ್ದಾಳೆ. 1. ತಿರುಪ್ಪಾವೈ 2. ನಾಚ್ಚಿಯಾರ್ ತಿರುಮೊಳಿ

ಇವೆರಡರಲ್ಲಿ ಬೇರೆ ಕಡೆಗಳಲ್ಲಿಯಂತೆ ಕನ್ನಡದ ಲೇಖಕರೂ ಕೂಡ ತುಂಬಾ ಇಷ್ಟ ಪಟ್ಟಿರುವುದು 'ತಿರುಪ್ಪಾವೈ' ಎನ್ನುವ ದಿವ್ಯ ಕೃತಿಯನ್ನೆ.

ಕನ್ನಡದ ಲೇಖಕರು ಈ ಕೃತಿಯ ಪರಿಚಯವನ್ನು ಕನ್ನಡದಲ್ಲಿ ಮಾಡಿ ಕೊಡುವಾಗ ತುಂಬು ಹೃದಯದಿಂದ ತಮ್ಮೆಲ್ಲ ಶಕ್ತಿ, ಸಾಮರ್ಥ್ಯ, ತನು ಮನಗಳನ್ನೆಲ್ಲ ಅರ್ಪಿಸಿದ್ದಾರೆ. ತಾವು ರೂಪಿಸುತ್ತಿರುವುದು ತಮ್ಮ ಶ್ರೇಷ್ಠ ಕೃತಿಯೆಂದೇ ತಿರುಪ್ಪಾವೈ ಪಾಶುರಗಳಲ್ಲಿನ ಸಹಜ ಸೌಂದರ್ಯವನ್ನು ತಾವೂ ಅನುಭವಿಸಿ, ಕನ್ನಡದ ಓದುಗರಿಗೂ ಆ ರಸಾಸ್ವಾದನೆಯನ್ನು ನೀಡಿದ್ದಾರೆ. ಸಿಹಿ ಊಟವನ್ನು ಉಣಬಡಿಸಿದ್ದಾರೆ. ಆ ಕಾವ್ಯ

> ಕಾರಣಾಂತರಗಳಿಂದ ಈ ತಿಂಗಳು ತಿರುಪ್ಪಾವೈ ಚಿತ್ರ ಮಂಜರಿಯನ್ನು ನೀಡಲಾಗಿಲ್ಲ. ವಾಚಕರು ಸಹಕರಿಸಬೇಕಾಗಿ ವಿನಂತಿ.—ಸಂ॥

# ತಿರುಮಲೆ ತಿರುಪತಿ ದೇವಸ್ಥಾನಗಳು

# ಶ್ರೀವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ

ಅನ್ನದಾನ ಮಾಡುವುದಕ್ಕಿಂತ ಮಿಗಿಲಾದ ಪವಿತ್ರ ದಾನ ಮತ್ತೊಂದಿಲ್ಲ. ಅದರಲ್ಲೂ ಶ್ರೀ ವೆಂಕಟೇಶ್ವರಸ್ವಾಮಿಯ ಆವಾಸವಾದ ತಿರುಮಲೆಯಲ್ಲಿ ಯಾತ್ರಿಕರಿಗೆ ಅನ್ನದಾನ ಮಾಡುವುದು ಮತ್ತೂ ಪುಣ್ಯಕರವಾದದ್ದು. ತಿ. ತಿ. ದೇವಸ್ಥಾನಗಳು ತಿರುಮಲೆಯಲ್ಲಿ ಯಾತ್ರಿಕ ಭಕ್ತರಿಗೆ ಉಚಿತ ಭೋಜನ ನೀಡುವ 'ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ' ಯನ್ನು ಆಚರಣೆಗೆ ತಂದಿದೆ.

## ಯೋಜನೆಯ ಕಾರ್ಯರೂಪ :

* ಯಾರಾದರೂ 12.5 ಲಕ್ಷ ರೂಗಳು ಅಥವಾ ಅದರ ಗುಣಕಗಳನ್ನು ದತ್ತಿ ನೀಡಬಹುದು. ತಿ.ತಿ. ದೇವಸ್ಥಾನಗಳು ಈ ದತ್ತಿಗೆ ಸಮನಾದ ಧನವನ್ನು ಸೇರಿಸಿ, ಒಟ್ಟು ಮೊತ್ತದ ಮೇಲಣ ವಾರ್ಷಿಕ ಬಡ್ಡಿಯಿಂದ ದಿನವೊಂದಕ್ಕೆ 500 ಮಂದಿಗೆ ಉಚಿತ ಭೋಜನ ವ್ಯವಸ್ಥೆ ಮಾಡುತ್ತದೆ. ರೂ 10 ಲಕ್ಷ ನೀಡಿದಲ್ಲಿ ಇನು ಮುಂದೆ ಪ್ರತಿದಿನ 400 ಮಂದಿಗೆ ಮಾತ್ರ ಉಚಿತ ಭೋಜನ ನೀಡಲಾಗುವುದು.

* ಈಗಾಗಲೇ ರೂ 10 ಲಕ್ಷ ದತ್ತಿ ನೀಡಿರುವವರ ಹೆಸರಿನಲ್ಲಿ ಪ್ರತಿದಿನ 500 ಮಂದಿಗೆ ಭೋಜನ ವ್ಯವಸ್ಥೆ ಮಾಡಲಾಗುವುದು. (ಉಳಿಕೆ ಹಣ ತಿ.ತಿ.ದೇ. ನಿಧಿಯಿಂದ ಹಾಕಲಾಗುತ್ತದೆ).

* ದತ್ತಿಯನ್ನು ವ್ಯಕ್ತಿ, ಸಂಸ್ಥೆ, ಸಂಘಗಳು ನೀಡಬಹುದು.

* ಊಟದ ಕೋಣೆಯಲ್ಲಿ ದಾನಿಗಳ ಹೆಸರನ್ನು ಪ್ರಮುಖವಾಗಿರುವಂತೆ ಬರೆದಿಡಲಾಗುವುದು.

## ದಾನಿಗಳಿಗೆ ದೊರೆಯುವ ಸೌಲಭ್ಯಗಳು :

* ವರ್ಷಕ್ಕೊಮ್ಮೆ ಮೂರುದಿನಗಳ ಕಾಲ ತಿರುಮಲೆಯಲ್ಲಿ ದಾನಿಯ ಹಾಗೂ ಅವರ ಕುಟುಂಬದವರಿಗೆ ಉಚಿತ ವಸತಿ, ಹಾಗೂ ವಿರಾಮದ ವೇಳೆಯಲ್ಲಿ ದರ್ಶನ ಆರತಿಯನ್ನು ಒದಗಿಸಲಾಗುವುದು.

* ದಾನಿಗಳ ಈ ದಾನಕ್ಕೆ 80 (G) ಕಲಮಿನಂತೆ ಆದಾಯಕರ ಮಾಫಿ ಉಂಟು.

* ದಾನಿಗಳನ್ನು ಈ ಯೋಜನೆಯ ಕಾರ್ಯಾಚರಣೆಯ ಉಸ್ತುವಾರಿ ನೋಡಲು ಸಲಹಾಸಮಿತಿ ಸದಸ್ಯರನ್ನಾಗಿ ಮಾಡಿಕೊಳ್ಳಲಾಗುವುದು.

* ಈವರೆಗೆ ದತ್ತಿನೀಡಿದವರ ವಿವರಗಳು ಈ ರೀತಿ ಇವೆ

| | | |
|---|---|---|
| 1. | ಶ್ರೀ ಎಲ್. ವಿ. ರಾಮಯ್ಯ, ಮದ್ರಾಸ್ | ರೂ 10 ಲಕ್ಷ |
| 2. | ಶ್ರೀ ಮಾನಸಿಂಗ್ ಕಾ, ಬೊಂಬಾಯಿ | ರೂ 20 ಲಕ್ಷ |
| 3. | ಶ್ರೀ ಆರ್. ಪಿ. ಗೋಯಂಕ, ಕಲ್ಕತ್ತ | ರೂ 10 ಲಕ್ಷ |
| 4. | ಶ್ರೀ ಈಶ್ವರಪ್ರಸಾದ ಪೋದ್ದಾರ್, ಕಲ್ಕತ್ತ | ರೂ 10 ಲಕ್ಷ |
| 5. | ಶ್ರೀ ಧೀರೂಭಾಯಿ ಅಂಬಾನಿ (ರಿಲಯನ್ಸ್ ಟೆಕ್ಸ್‌ಟೈಲ್ಸ್. ಬೊಂಬಾಯಿ) | ರೂ 10 ಲಕ್ಷ |
| 6. | ಶ್ರೀ ಬಿ ಎಂ. ಖೈತಾನ್. ಕಲ್ಕತ್ತ | ರೂ 10 ಲಕ್ಷ |
| 7. | ಶ್ರೀ ಛಬ್ರಿಯಾ ಚಾರಿಟಿ ಟ್ರಸ್ಟ್, ಬೊಂಬಾಯಿ | ರೂ 10 ಲಕ್ಷ |
| 8. | ಶ್ರೀ ರಾಮನಾಥಗೋಯಂಕಾ, ಮದರಾಸು | ರೂ 10 ಲಕ್ಷ |
| 9. | ಶ್ರೀ ಹೇಮರಾಜ ಪೋದ್ದಾರ್ ಚಾರಿಟಿ ಟ್ರಸ್ಟ್, ಕಲ್ಕತ್ತ | ರೂ 10 ಲಕ್ಷ |

**ಇದುವರೆಗಿನ ಪ್ರತಿಕ್ರಿಯೆ ಅತ್ಯುತ್ತಮ.**

**ಯಾತ್ರಿಕರಿಗೆ ಹೆಚ್ಚಿನ ಸೇವೆ ಸಲ್ಲಿಸಲು ಉದಾರವಾಗಿ ನೀಡಿರಿ.**

ಮಿಕ್ಕ ವಿವರಗಳಿಗೆ ಕೂಡಲೇ ಬರೆಯಿರಿ :

**ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇವಸ್ಥಾನಗಳು, ತಿರುಪತಿ–೫೧೭೫೦೧ ಆಂ.ಪ್ರ.**

ಸಂಚಯನದಲ್ಲಿ ತಮ್ಮನ್ನು ತಾವು ಮುಳುಗಿಸಿಕೊಂಡು ಅಪರೂಪ ಕೃತಿ ರತ್ನವನ್ನು ನೀಡಿದ್ದಾರೆ.

ಆ ನ. ಶ್ರೀನಿವಾಸ ಅಯ್ಯಾಂಗಾರ್ ರವರ 'ತಿರುಪ್ಪಾವೈ' ಕೃತಿಯು 1946 ರಲ್ಲಿ ಪ್ರಕಟವಾಗಿದ್ದು, ಈ ನಿಟ್ಟಿನಲ್ಲಿನ ಮೊದಲ ಗ್ರಂಥ. ಮೂಲ ಕನ್ನಡ (ಅಕ್ಷರಗಳಲ್ಲಿರುವ) ತಿರುಪ್ಪಾವೈ ಪಾಶುರಗಳಿಗೆ ಸುಂದರ ಹಾಗೂ ಕಾವ್ಯಮಯವಾದ ಕನ್ನಡ ಅನುವಾದವಿದೆ. ಓದಲು ಬಲು ಸೊಗಸು.

ಜಿ. ಪಿ. ರಾಜರತ್ನಂ ರವರ (1961 ರಲ್ಲಿ ಮುದ್ರಿತ) 'ತಿರುಪ್ಪಾವೈ' ತಮಿಳು ಮೂಲ, ಕನ್ನಡ ಅನುವಾದಗಳಿಂದ ಕೂಡಿದ್ದು ಪ್ರತಿಪದಾರ್ಥ, ತಾತ್ಪರ್ಯಗಳನ್ನೂ ನೀಡಿ, ಇಂಪಾದ ಪದ್ಯಮಾಲೆ ಎಂಬುದನ್ನು ಸಾರ್ಥಕ ಪಡಿಸಿದ್ದಾರೆ.

ಎಸ್. ರಂಗಾಚಾರ್ ರವರ (1983 ರಲ್ಲಿ ಮುದ್ರಿತ) 'ತಿರುಪ್ಪಾವೈ' ಕೃತಿಯು ತಮಿಳು ಮೂಲ, ಕನ್ನಡ ಅನುವಾದ (ಪ್ರತಿ ಪದಾರ್ಥ) ದೊಂದಿಗೆ ವಿಶೇಷ ಟಿಪ್ಪಣಿಗಳು, ಸ್ವಾಪದೇಶಾರ್ಥಗಳಿಂದ ಕೂಡಿರುವ ವಿವರಗಳು ಹಾಗೂ ಅವತರಣಿಕೆಗಳನ್ನು ಹೊಂದಿವೆ. ಪಂಡಿತ ಪಾಮರರೀರ್ವರಿಗೂ ಸಹಾಯಕವಾಗುವ ಈ ಗ್ರಂಥವನ್ನು ಬಹಳ ಶ್ರಮವಹಿಸಿ ಲೇಖಕರು ಬರೆದಿದ್ದಾರೆಂಬುದನ್ನು ಪುಸ್ತಕವನ್ನು ನೋಡಿಯೇ ತಿಳಿಯಬಹುದು.

ಎಸ್. ಕೃಷ್ಣ ತಾತಾಚಾರ್ಯರವರ 'ತಿರುಪ್ಪಾವೈ ರಸಾಸ್ವಾದಿನಿ' (1965 ರಲ್ಲಿ ಮುದ್ರಿತ) ಮತ್ತು ಎಸ್. ಸಂಪತ್ತೈಯ್ಯಂಗಾರ್ ರವರ ತಿರುಪ್ಪಾವೈ ಹೃದಯಂ–(1967 ರಲ್ಲಿ ಮುದ್ರಿತ) ಇವೆರಡೂ ಬೃಹತ್ ಗ್ರಂಥಗಳು. ಪ್ರತಿಯೊಂದೂ 600 ಕ್ಕೂ ಮಿಕ್ಕು ಪುಟಗಳನ್ನು ಹೊಂದಿದೆ. ಇವು ಪಂಡಿತರಿಗಾಗಿ ಬರೆದಂತಹವುಗಳು. ಬಹಳ ಆಳವಾದ, ಗಹನವಾದ ತಾತ್ತ್ವಿಕ ವಿಷಯಗಳನ್ನೂ, ತಿರುಪ್ಪಾವೈನ ಪ್ರತಿ ಪಾಶುರದಲ್ಲೂ ಕಂಡು ಬರುವ ವಿಶೇಷಾರ್ಥಗಳನ್ನೂ, ಸ್ವಾಪದೇಶಾರ್ಥಗಳನ್ನೂ ವಿಶದ ರೀತಿಯಲ್ಲಿ ಇಬ್ಬರೂ ನೀಡಿದ್ದಾರೆ. ಒಟ್ಟಿನಲ್ಲಿ ಇವೆರಡೂ ಅಪರೂಪವಾಗಿರುವ ಸಂಪುಟಗಳೇ ಅಲ್ಲದೆ, ಶ್ರೀವೈಷ್ಣವರಿಗೆ ತುಂಬಾ ಉಪಯುಕ್ತವಾದ ಗ್ರಂಥಗಳು.

ತುಂಬಾ ಇತ್ತೀಚಿನವಾದ ಪ್ರೊ॥ ಕೆ. ಎಸ್. ನಾರಾಯಣಾಚಾರ್ಯರ 'ತಿರುಪ್ಪಾವೈ'(1985 ರಲ್ಲಿ ಮುದ್ರಿತ) ಕೃತಿಯು ಮೂಲ ಹಾಗೂ ಕನ್ನಡ ಅನುವಾದಗಳೊಂದಿಗೆ ತಮ್ಮದೇ ಆದ ಸುಬೋಧಿನೀ ವ್ಯಾಖ್ಯಾನವನ್ನು ನೀಡಿ, ಉಪಯುಕ್ತಗೊಳಿಸಿದ್ದಾರೆ. ಕನ್ನಡದಲ್ಲಿ ಅತ್ಯಂತ ಜನಪ್ರಿಯ ಪುಸ್ತಕವಿದು.

ಮೇಲೆಯ್ಯ ತಿಳಿಸಿರುವವುಗಳೇ ಅಲ್ಲದೆ ಮಂ.ಬಿ. ಶ್ರೀನಿವಾಸಯ್ಯಂಗಾರ್. ಎಂ. ಟಿ. ನರಸಿಂಹಯ್ಯಂಗಾರ್ ಹಾಗೂ ತೂಕ್ಕಲ್ ರಾಸವಾಚಾರ್ ರವರುಗಳೂ 'ತಿರುಪ್ಪಾವೈ' ಅನ್ನು ಕನ್ನಡದಲ್ಲಿ ಗದ್ಯ ರೂಪದಲ್ಲಿ ಅನುವಾದಿಸಿದ್ದಾರೆ. ಆದರೆ ಇವು ಈಗ ಅಪ್ರಾಪ್ಯವಾಗಿ, ಅಪರೂಪವಾಗಿವೆ.

ವಿದ್ವಾನ್ ಪಿ. ಜಿ. ಶ್ರೀನಿವಾಸನ್ ರವರ 'ಆಂಡಾಳ್–ಗೋದಾದೇವಿ' ಎನ್ನುವ ಕೃತಿಯು ಆಸ್ತಿಕರನ್ನು ಆಕರ್ಷಿಸುವಂತಿದೆ. ಅಂತೆಯೇ ಎಂ. ಓ. ಎಸ್. ಅಯ್ಯಂಗಾರ್ ರವರ 'ಆಳ್ವಾರುಗಳ ಚರಿತ್ರೆ'ಯಲ್ಲಿನ ಆಂಡಾಳ್ ಜೀವನ ಚರಿತ್ರೆ.

ಬಹಳ ಹಿಂದೆಯೇ ಎಸ್. ಜಿ. ಗೋವಿಂದರಾಜಯ್ಯಂಗಾರ್ ರವರು 'ತಿರುಪ್ಪಾವೈ' ಯನ್ನು ವಾರ್ಧಕ ಷಟ್ಪದಿಗಳಲ್ಲಿ ಕನ್ನಡಿಸಿರುತ್ತಾರೆ. ಇದನ್ನು 'ಶ್ರೀಕೃಷ್ಣ ಸೇವಾಮೃತಂ' ಎಂಬ ಹೆಸರಿನಲ್ಲಿ ಜಿ. ಪಿ. ರಾಜರತ್ನಂ ರವರು ತಮ್ಮ ಗ್ರಂಥಮಾಲೆಯಲ್ಲಿ ಪ್ರಕಟಿಸಿರುತ್ತಾರೆ.

'ಶ್ರೀವಿಷ್ಣು ಚಿತ್ತ' ಎನ್ನುವ ಜಿ. ಪಿ. ರಾಜರತ್ನಂ ರವರ ಪುಟ್ಟ ಪುಸ್ತಕದಲ್ಲಿ ಗೋದಾದೇವಿಯ ಅಲ್ಪ ಪರಿಚಯವಿದೆ.

ಇದೇ ಲೇಖಕರ 'ಪ್ರಾಣೇಶ್ವರ ಪ್ರಾಪ್ತಿ' ಎನ್ನುವ ಪುಸ್ತಕದಲ್ಲಿ ಆಂಡಾಳ್‌ರವರ 'ನಾಚ್ಚಿಯಾರ್ ತಿರುಮೊಳಿ' ಎನ್ನುವ ಕೃತಿಯ ಅಂಗವಾದ 'ವಾರಣ ಮಾಯಿರಮ್' ಎಂಬ ಹತ್ತು ಪದ್ಯಗಳ ತಮಿಳು ಮೂಲ ಹಾಗೂ ಕನ್ನಡ ಅನುವಾದವಿದೆ. ಅಂತೆಯೇ ಇದರಲ್ಲಿ 'ತಿರುಪ್ಪಾವೈ'ನ ಸುಲಭ ಕನ್ನಡ ಪದ್ಯಾನುವಾದವೂ ಇದೆ.

## ಆಂಡಾಳರನ್ನು, ಅವರ ಕೃತಿಗಳನ್ನು ಕುರಿತಾದ ಇತರೆ ಗ್ರಂಥಗಳು

ಎನ್. ಎಸ್. ಅನಂತರಂಗಾಚಾರ್ ರವರು 'ಆಳ್ವಾರರುಗಳೂ ಶ್ರೀಮದ್ ವೇಂಕಟನಾಯಕನೂ' ಎನ್ನುವ ಕೃತಿಯಲ್ಲಿ (1984 ಮುದ್ರಿತ) ಆಂಡಾಳ್ ರವರು 'ನಾಚ್ಚಿಯಾರ್ ತಿರುಮೊಳಿ' ಯಲ್ಲಿ ತಿರುಪತಿಯ ಶ್ರೀನಿವಾಸನನ್ನು ಸ್ತುತಿಸಿದ ಮೂಲ ಪಾಶುರಗಳು ಹಾಗೂ ಕನ್ನಡ ಅನುವಾದವನ್ನು ನೀಡಿದ್ದಾರೆ.

'ನಾಯಕೀಗೀತೆ' ಎನ್ನುವ ಹೆಸರಿನಲ್ಲಿ ಆ. ನ. ಶ್ರೀನಿವಾಸಯ್ಯಂಗಾರ್ ರವರು ಗೋದಾದೇವಿಯ 'ನಾಚ್ಚಿಯಾರ್ ತಿರುಮೊಳಿ'ಯನ್ನು ಮೂಲ ಕನ್ನಡ ಅನುವಾದ ಹಾಗೂ ವಿಶೇಷಾರ್ಥಗಳೊಡನೆ 1955 ರಲ್ಲಿ ಪ್ರಕಟಿಸಿದ್ದಾರೆ. ಈ ವರ್ಷ ಇದರ ಎರಡನೆ ಮುದ್ರಣವನ್ನು ಹೊರ ತರುವುದರಲ್ಲಿದ್ದಾರೆ. ಇದೇ ಕೃತಿಯನ್ನು ಎಸ್. ಕೃಷ್ಣ ತಾತಾಚಾರ್ಯ ರವರು ಅನುವಾದಿಸಿದ್ದು, ಇನ್ನೂ ಹಸ್ತಪ್ರತಿಯ ರೂಪದಲ್ಲಿಯೆ ಇದೆ.

'ಗೋದಾಸ್ತುತಿ' ಎನ್ನುವ ಆಂಡಾಳ್ ರವರನ್ನು ಕುರಿತಾದ ಗ್ರಂಥವನ್ನು ಎಸ್. ಎಸ್. ಅನಂತರಂಗಾಚಾರ್ ಹಾಗೂ ಎಸ್. ಸಂಪತ್ತಯ್ಯಂಗಾರ್ ರವರು ಕನ್ನಡಕ್ಕೆ ಅನುವಾದಿಸಿದ್ದಾರೆ.

'ಶ್ರೀ ಗೋದಾ ಶ್ರೀ ಸೂಕ್ತಿ ಮಂಜರಿ' ಎನ್ನುವ ಮಂಡ್ಯದ ಶ್ರೀದೇವಿಯವರ ಕೃತಿಯಲ್ಲಿ 'ತಿರುಪ್ಪಾವೈ ವಿಶೇಷಾನುಭವ', 'ಗೋದಾದೇವಿ ಮತ್ತು ವೇದಾಂತ ದೇಶಿಕರು', 'ನಾಚ್ಚಿಯಾರ್ ತಿರುಮೊಳಿಯ ರಸಾನುಭವ' – ಇತ್ಯಾದಿ ಪ್ರಬಂಧಗಳಿವೆ.

ಇದೇ ರೀತಿಯಲ್ಲಿ ಮೇಲುಕೋಟೆಯ ವಿಶದ ವಾಕ್ ಪ್ರಕಾಶನವು 'ತಿರುಪ್ಪಾವೈ'ನ ಕನ್ನಡದ್ದೇ ಅಲ್ಲದೆ ಸಂಸ್ಕೃತದ ಅನುವಾದವನ್ನೂ ಪ್ರಕಟಿಸಿದೆ. ಅಂತೆಯೆ ಇದರ ಅರೆಯರ್‌ರವರು 'ನಾಚ್ಚಿಯಾರ್ ತಿರುಮೊಳಿ'ಯನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ.

ದೆಹಲಿ ವಿಶ್ವವಿದ್ಯಾನಿಲಯದ ಡಾ॥ ವಿನೋದ ರವರು 'ಆಂಡಾಳ್ – ಮೀರಾ– ಮಹಾದೇವಿ' ಎನ್ನುವ ಕೃತಿಯ ಒಂದು ಮಹಾನ್ಯಾಸವಾಗಿದ್ದು, ಆಂಡಾಳರ ಭಕ್ತಿ ತತ್ತ್ವವನ್ನು ಮೀರಾ, ಮಹಾದೇವಿಯವರ ಭಕ್ತಿ ಕಾವ್ಯದೊಂದಿಗೆ ಹೋಲಿಸಿದ್ದಾರೆ.

ಮಾಸ್ತಿಯವರ 'ಭಟ್ಟರ ಮಗಳು' ಎನ್ನುವ ನಾಟಕವು ಆಂಡಾಳ್ ರವರ ಬಾಲ್ಯ ಜೀವನವನ್ನು ಚಿತ್ರಿಸುವ ಒಂದು ಸುಂದರ ಕೃತಿಯಾಗಿದೆ

ನಿರುಪಮಾರವರು ಕೃಷ್ಣದೇವರಾಯನ 'ಆಮುಕ್ತಮಾಲ್ಯದ' ಎನ್ನುವ ಆಂಡಾಳ್ ಜೀವನ ಚರಿತ್ರೆಯ ತೆಲುಗು ಕಾವ್ಯವನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ.

ಒಟ್ಟಿನಲ್ಲಿ ಆಂಡಾಳ್ ರವರ ಕೃತಿಗಳನ್ನು ಅವುಗಳ ಅಂತಸ್ಸತ್ವವನ್ನು ಕನ್ನಡಿಗರು ಓದಿ ಆನಂದಿಸಲು ಅಪಾರವಾದ ಸಾಹಿತ್ಯವು ಇಂದು ನಿರ್ಮಾಣವಾಗಿದೆ. ಇದು ಕರ್ನಾಟಕದಲ್ಲಿ ಆಂಡಾಳ್ ಎಷ್ಟೊಂದು ಜನಪ್ರಿಯಳೆಂಬುದನ್ನು ತೋರಿಸುತ್ತದೆ.

ಕನ್ನಡ ಪತ್ರಿಕೆಗಳಲ್ಲಿಯೂ ಕೂಡ ಆಂಡಾಳ್ ಹಾಗೂ ಅವರ ಕೃತಿಗಳನ್ನು ಕುರಿತಾದ ಪ್ರಬಂಧಗಳು ಬೇಕಾದಷ್ಟು ಬಂದಿವೆ. 'ಸಪ್ತಗಿರಿ' ಮಾಸಿಕ ಪತ್ರಿಕೆಯಲ್ಲಿ ಇಂತಹ ಅನೇಕ ಪರಿಚಯಾತ್ಮಕ ಲೇಖನಗಳು ಪ್ರಕಟವಾಗಿವೆ. ಜೀವನ, ಜಯಕರ್ನಾಟಕ, ಕನ್ನಡ ಪ್ರಭಾ ಪತ್ರಿಕೆಗಳಲ್ಲಿಯೂ ಇಂತಹ ಅನೇಕ ಲೇಖನಗಳು ಪ್ರಕಟವಾಗಿವೆ.




ಮಾರಾಟಕ್ಕೆ ಸಿದ್ಧವಾಗಿವೆ
ತಾಮ್ರ ಚಿತ್ರಪಟಗಳು
ಶ್ರೀ ವೆಂಕಟೇಶ್ವರಸ್ವಾಮಿ
ಹಾಗೂ
ಶ್ರೀ ಪದ್ಮಾವತೀ ಅಮ್ಮನವರ
ಆಕರ್ಷಕ ತಾಮ್ರಚಿತ್ರಗಳ ಫಲಕಗಳು-
ಸುಲಭ ಬೆಲೆಯಲ್ಲಿ ದೀರ್ಘಕಾಲ
ಬಾಳಿಕೆ ಬರುವ ಸುಂದರ ತಾಮ್ರ ಚಿತ್ರಗಳು
ಎಲ್ಲ ತಿ. ತಿ. ದೇ. ಪ್ರಕಟನ ಮಾರಾಟ ಮಳಿಗೆಗಳಲ್ಲೂ
ದೊರೆಯುತ್ತವೆ.

# ಆತ್ಮಾಪಹಾರ

ಶ್ರೀ ವಿ.ಎಸ್. ರಾಮಾನುಜಾಚಾರ್ಯ

ಅಪಹಾರ ಎಂದರೆ ಸಾಮಾನ್ಯವಾಗಿ ತನ್ನದಲ್ಲದ ವಸ್ತುವನ್ನು ಬಲವಂತವಾಗಿ ತನ್ನದಾಗಿಸಿಕೊಳ್ಳುವುದು. ಆತ್ಮಾಪಹಾರ ಎಂದರೆ ಆತ್ಮವನ್ನು ಅಪಹರಿಸುವುದು ಎಂಬರ್ಥವಾಗುತ್ತದೆ. ಆಗ ಆತ್ಮ ಎಂಬರೇನು? ಅವನ ಸ್ವರೂಪ ಎಂತಹುದು?, ಅವನು ಸ್ವತಂತ್ರನೇ ಅಥವಾ ಯಾರಿಗಾದರೂ ಅಧೀನನಾಗಿರುವನೇ?, ಯಾರಿಗಾದರೂ ಸೇರಿದವನೆಂದರೆ ಇವನ ಸ್ವಾಮಿ ಯಾರು? ಇಂತಹವನೇ ಸ್ವಾಮಿ–ಇಂತಹವನೇ ಸೊತ್ತು ಎಂದು ನಿರ್ಧರಿಸುವುದಕ್ಕೆ ಆಧಾರಗಳೇನಿವೆ, ಪ್ರಮಾಣಗಳಾವುವು ಇವೆ ಎಂಬುದನ್ನು ತಿಳಿಯಬೇಕು. ವೈದಿಕ ಧರ್ಮ ಪ್ರವೃತ್ತರಾದವರೆಲ್ಲಾ ವೇದ ಪ್ರಾಮಾಣ್ಯವನ್ನಂಗೀಕರಿಸುತ್ತಾರೆ. ಯಾಕೆಂದರೆ 'ಆದೌ ವೇದಾಃ ಪ್ರಮಾಣಂ' ಎಂದಿದೆ. ಮತ್ತೆ ಈ ವೇದಾರ್ಥಗಳನ್ನು ಪ್ರತಿಪಾದಿಸುವ ಪ್ರಸ್ಥಾನತ್ರಯಗಳೆಂದು ಪ್ರಸಿದ್ಧವಾದ "ಉಪನಿಷತ್ತುಗಳು–ಬ್ರಹ್ಮಸೂತ್ರಗಳು, ಭಗವದ್ಗೀತೆ" ಇವೆ. ಪುನಃ ವೇದದ ಅಂತರಾರ್ಥಗಳನ್ನು ಎಲ್ಲರಿಗೂ ತಿಳಿಯುವಂತೆ ಪ್ರತಿಪಾದಿಸುವ ಗ್ರಂಥಗಳು ಇತಿಹಾಸ ಶ್ರೇಷ್ಠಗಳಾದ ರಾಮಾಯಣ, ಮಹಾಭಾರತಗಳು ಮತ್ತು ಪುರಾಣಾದಿಗಳು – ಆತ್ಮ, ಪರಮಾತ್ಮರ ವಿಷಯಗಳನ್ನು ತಿಳಿಯಲು ಇವೆಲ್ಲಾ ಸಹಕಾರಿಗಳಾಗಿವೆ. ಈಗ ಪ್ರಸ್ತುತ ವಿಷಯವಾದ 'ಆತ್ಮಾಪಹಾರ' ಎಂಬ ವಿಷಯಕ್ಕೆ ಯಾವ ಯಾವ ಆಧಾರಗಳು ಎಲ್ಲೆಲ್ಲಿ ನಾವು ಕಾಣಬಹುದೆಂಬುದನ್ನು ಪರಿಶೀಲಿಸಬೇಕು.

ಮಹಾಭಾರತದ ಉದ್ಯೋಗ ಪರ್ವದಲ್ಲಿ ಸನತ್ಸುಜಾತರವಾಕ್ಯ ಹೀಗಿದೆ-"ಯೋನ್ಯಥಾ ಸಂತಮಾತ್ಮಾನಂ ಅನ್ಯಥಾ ಪ್ರತಿಪದ್ಯತೇ ಕಿಂ ತೇನ ನ ಕೃತಂ ಪಾಪಂ ಚೋರೇಣಾತ್ಮಾಪಹಾರಿಣಾ" (ತನ್ನದಲ್ಲದ ಆತ್ಮನನ್ನು ತನ್ನದೆಂದು ತಿಳಿದುಕೊಳ್ಳುವ ಮತ್ತು ಅದನ್ನು ಸ್ವತಂತ್ರವೆಂದು ತಿಳಿದುಕೊಳ್ಳುವವನಿಂದ ಯಾವ ಪಾಪತಾನೇ ಮಾಡಲ್ಪಡಲಿಲ್ಲ ಎಂದರೆ ಎಲ್ಲ ಪಾಪಗಳನ್ನೂ ಮಾಡಿದವನಾಗುತ್ತಾನೆ) ಎಂದುಕ್ತವಾಗಿದೆ. ಇಲ್ಲಿ ವ್ಯಕ್ತವಾಗಿ ಹೇಳುವ ಆತ್ಮಾಪಹಾರದಿಂದ ಆತ್ಮ ಸ್ವತಂತ್ರನಲ್ಲ ಅವನು ಒಬ್ಬರ ಸೊತ್ತು ಎಂದು ತಿಳಿಯಲ್ಪಡುತ್ತದೆ. ಇದನ್ನೇ ಪ್ರತಿಪಾದಿಸುವ ವಿಷ್ಣುಪುರಾಣದ ವಾಕ್ಯ 'ಅನಾತ್ಮನ್ಯಾತ್ಮ ಬುದ್ಧಿಸ್ಸ್ಯಾತ್, ಅಸ್ವೇ–ಸ್ವಮಿತಿ ಯಾ ಮತಿಃ' ಎಂಬುದು. ಪ್ರಥಮತಃ ಸ್ವಾಮಿ ಅಂದರೆ ಯಾರು, ಸೊತ್ತು ಎಂದರೆ ಏನು ಎನ್ನುವುದನ್ನು ವಿಮರ್ಶಿಸಿದರೆ "ಸ್ವಾಮಿತ್ವಾತ್ಮತ್ವ ಶೇಷಿತ್ವ ಪುಂಸಾದ್ಯಾಃ ಸ್ವಾಮಿನೋ ಗುಣಾಃ" ಎಂಬ ಸ್ವಾಮಿಲಕ್ಷಣವನ್ನೂ "ಸ್ವತ್ವ ದಾಸತ್ವ, ಕಾರ್ಯತ್ವ, ಶೇಷತ್ವ, ಸ್ತ್ರೀತ್ವ–ದಾಯಿನಃ" ಎಂದು ಸೊತ್ತಿನ ಲಕ್ಷಣವನ್ನೂ ಹಿರಿಯರು ಘೋಷಿಸಿದ್ದಾರೆ. ಅದರಂತೆ ಯಾವನು ಒಂದು ವಸ್ತುವನ್ನು ಪಡೆದು, ರಕ್ಷಿಸಿ, ಶಿಕ್ಷಿಸಿ, ವಶದಲ್ಲಿಟ್ಟುಕೊಂಡು ಅದನ್ನು ಯಾವ ರೀತಿ ಬೇಕಾದರೂ ಮಾಡುವಂತಹವನೋ ಅವನು ಸ್ವಾಮಿ ಎಂದೂ, ಅಂತಹ ಸ್ವಾಮಿಗೆ ಸೇವೆಮಾಡುತ್ತಾ, ವಿಧೇಯನಾಗಿ, ಅವನಿಗೆ ಶರೀರದಂತೆ ಇದ್ದು, ಅವನಿಗೆ ಅಧೀನನಾಗಿ ಅವನ ಕೈಂಕರ್ಯಪರನಾಗಿರುವುದು ಸೊತ್ತಾದವನಿಗೆ ಲಕ್ಷಣ ಎಂದೂ ನಿರ್ಣಯಿಸಲು ಸಾಧ್ಯ. ಇದರಲ್ಲಿ ವ್ಯತ್ಯಾಸಭಾವ ಏನಾದರೂ ಸೊತ್ತಾದವನಲ್ಲಿ ಕಂಡುಬಂದರೆ ಅದು ಕಳ್ಳತನಕ್ಕೆ ಸಮನಾಗಿ, ಆತ್ಮಾಪಹಾರ ಎಂಬುದು ಸಿದ್ಧವಾಗುತ್ತದೆ ಎಂದು ವಿಷ್ಣುಧರ್ಮದಲ್ಲಿ ಹೇಳಿರುವ ವಾಕ್ಯ.

ಸ್ವತ್ವಮಾತ್ಮನಿ ಸಂಜಾತಂ
ಸ್ವಾಮಿತ್ವಂ ಬ್ರಹ್ಮಣಿ ಸ್ಥಿತಂ
ಉಭಯೋರೇಷ ಸಂಬಂಧೋ
ನೇತರೋಽಭಿಮತೋ ಮಮ ||

(ಆತ್ಮನಲ್ಲಿ ಸ್ವತ್ವವೂ (ಸೊತ್ತು) ಬ್ರಹ್ಮನಲ್ಲಿ ಸ್ವಾಮಿತ್ವವೂ ಇದೆ. ಇದರಲ್ಲಿರುವ ಸಂಬಂಧಕ್ಕೆ ವಿರುದ್ಧ ಸಂಬಂಧ ಸರಿಯಾದುದಲ್ಲ) ಇದರಿಂದ ಸ್ಪಷ್ಟವಾಗುತ್ತದೆ.

ಈಗ ಹಿಂದೊಂದಾಗಿ ಪರಬ್ರಹ್ಮನಲ್ಲಿರುವ ಸ್ವಾಮಿಲಕ್ಷಣಗಳ ವಿಷಯವಾದ ಪ್ರಮಾಣಗಳನ್ನಿಲ್ಲಿ ಕಾಣಬಹುದು:–

ಭಗವಂತ ಆತ್ಮನ ಜನ್ಮ, ರಕ್ಷಣ, ಪ್ರಳಯಗಳಿಗೆ ಕಾರಣನಾದವನು ಹೇಗೆಂದರೆ:–

"ಸೋಽಕಾಮಯತ ಬಹುಸ್ಯಾಂ ಪ್ರಜಾಯೇಯೇತಿ" ಎಂದು ತೈತ್ತಿರೀಯ ಆರಣ್ಯಕದಲ್ಲೂ, "ತದೈಕ್ಷತ ಬಹುಸ್ಯಾಂ" ಎಂದು ಛಾಂದೋಗ್ಯೋಪನಿಷತ್ತಿನಲ್ಲೂ, 'ಯತೋ ವಾ ಇಮಾನಿ ಭೂತಾನಿ ಜಾಯಂತೇ, ಯೇನ ಜಾತಾನಿ ಜೀವಂತಿ, ಯತ್ಪ್ರಯಂತ್ಯಭಿಸಂವಿಶಂತೀತಿ, ತದ್ವಿಜಿಜ್ಞಾಸಸ್ವ, ತದ್ಬ್ರಹ್ಮೇತಿ' ಎಂದೂ ತಜ್ಜಲಾನೀತಿ ಶಾಂತ ಉಪಾಸೀತ, ಅಕಾರಾರ್ಥೋ ವಿಷ್ಣುಃ, ಜಗದುದಯ ರಕ್ಷಾಪ್ರಳಯಕೃತ್ (ಅಷ್ಟಶ್ಲೋಕೀ), ವಿಷ್ಣೋಸ್ಸಕಾಶಾದುದ್ಭೂತಂ ಜಗತ್ತತ್ರೈವ ಚ ಸ್ಥಿತಂ, ಸ್ಥಿತಿ ಸಂಯಮ ಕರ್ತಾಸೌ ಜಗತೋಽಸ್ಯ ಜಗಚ್ಚ ಸಃ (ವಿಷ್ಣುಪುರಾಣ), ಸೃಷ್ಟಾ ಸೃಜತಿ ಚಾತ್ಮಾನಂ ವಿಷ್ಣುಃ ಪಾಲ್ಯಂ ಚ ಪಾತಿ ಚ ಉಪಸಂಹ್ರಿಯತೇ ಚಾಂತೇ (ವಿ. ಪು) 'ಸ ಏವ ಸೃಜ್ಯಸ್ಸಚ ಸರ್ಗಕರ್ತಾ ಸ ಏವ ಪಾತ್ಯತ್ತಿ ಚ ಪಾಲ್ಯತೇ ಚ (ವಿ. ಪು) ಮತ್ತು ಭಗವದ್ಗೀತೆಯಲ್ಲಿ ಮಮ ಯೋನಿರ್ಮಹದ್ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಂ, ಸಂಭವಸ್ಸರ್ವಭೂತಾನಾಂ ಎಂದೂ, ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ ಎಂದೂ ಅಹಂ ಸರ್ವಸ್ಯ ಪ್ರಭವಃ ಮತ್ತಃ ಸರ್ವಂ ಪ್ರವರ್ತತೇ ಎಂದೂ ಪ್ರಭವಃ ಪ್ರಲಯಃ ನಿದಾನಂ ಬೀಜಮವ್ಯಯಂ ಎಂದೂ, ದಿವ್ಯ ಪ್ರಬಂಧಗಳಲ್ಲಿ ಪರಂದೈವಮುಂ ಪಲ್ಲುಲಕುಂ ಪಡೈತ್ತನ್ನುಡನೇ ವಿಷುಂಗಿಕರಂದು ವಿಷಂದು ಕಡನ್ದಿಡು ಕಂಡು ಮೂವುಲಕ್ಕುಂ ಕಾವಲೋನ್ ಎಂದೂ ಅನೇಕ ಪ್ರಮಾಣಗಳಿಂದ ಪರಮಾತ್ಮನೇ ಜಗತ್ತಿನ,

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | ಶುಕ್ರವಾರಗಳಲ್ಲಿ | |
|---|---|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 | ಪ್ರಾ 6–00 | ಪ್ರಾ 5–30 | ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 | ಪ್ರಾ 6–30 | ಪ್ರಾ 6–00 | ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 | ಪ್ರಾ 7–00 | ಪ್ರಾ 6–30 | ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 | ಪ್ರಾ 7–30 | ಪ್ರಾ 7–00 | ಪ್ರಾ 7–30 |
| ಸರ್ವದರ್ಶನ | ಪ್ರಾ 7–30 | ಪ್ರಾ 10–00 | *ಅಭಿಷೇಕ ಪ್ರಾ 7–30 | ಪ್ರಾ 8–30 |
| | | | ಸಮರ್ಪಣ ಪ್ರಾ 8–30 | ಪ್ರಾ 9–30 |
| 2ನೇ ಅರ್ಚನೆ | | | | |
| 2ನೇ ಗಂಟೆ | ಪ್ರಾ 10–00 | ಪ್ರಾ 10–30 | ಪ್ರಾ 9–30 | ಪ್ರಾ 10–30 |
| *ಆರ್ಜಿತ ಕಲ್ಯಾಣೋತ್ಸವ | | | ಪ್ರಾ 10–30 | ಮ 12–00 |
| ಸರ್ವದರ್ಶನ | ಪ್ರಾ 10–30 | ಸಂ 6–30 | ಪ್ರಾ 10–30 | ಸಂ 6–30 |
| ರಾತ್ರಿ ಕೈಂಕರ್ಯ | | | | |
| ರಾತ್ರಿ ಗಂಟೆ | ಸಂ 6–30 | ರಾ 7–00 | ಸಂ 6–30 | ರಾ 7–00 |
| ಸರ್ವದರ್ಶನ | ರಾ 7–00 | ರಾ 8–45 | ರಾ 7–00 | ರಾ 8–45 |
| ಏಕಾಂತ ಸೇವೆ | ರಾ 8–45 | ರಾ 9–00 | ರಾ 8–45 | ರಾ 9–00 |

| | |
|---|---|
| *ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ಅರ್ಪಣೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

ಚೇತನದ, ಸೃಷ್ಟಿಸ್ಥಿತಿಸಂಹಾರಗಳಿಗೆ ಕಾ ಣನೆಂದು ಪ್ರಕಟಿಸಿವೆ.

ಸೃಷ್ಟಿಸಿದ ಆತ್ಮಗಳಲ್ಲಿ ಅಂತರಾತ್ಮನಾ ಪ್ರವೇಶಿಸಿ ಅವುಗಳನ್ನು ನಿಯಮಿಸುತ್ತಾ ಎಂಬುದಕ್ಕೆ ಪ್ರಮಾಣಗಳು ನೋ ಬಹುದ.:– ತೈತ್ತಿರೀಯ ಆರಣ್ಯಕದ ಅಂತಃಪ್ರವಿಷ್ಟಃ ಶಾಸ್ತಾ ಜನಾನಾ ಸರ್ವಾತ್ಮಾ ವೇದಪಲ್ಲಿ. ತತ್ಸೃಷ್ಟ್ವಾ ತದೇವಾನುಪ್ರಾವಿಶತ್ ಎಂದೂ, ಬೃಹ ದಾರಣ್ಯಕದಲ್ಲಿ ಯಃ ಪೃಥಿವ್ಯಾಂ ತಿಷ್ಠ ಯಃ ಆತ್ಮನಿ ತಿಷ್ಠ ಎಂಬುದಾಗಿಯೂ ವಿಷ್ಣುಪುರಾಣದಲ್ಲಿ ಶಾಸ್ತಾ ವಿಷ್ಣುರಶೇಷಸ ಜಗತಃ ಎಂದೂ, ಮನುಸ್ಮೃತಿಯ ಪ್ರಶಾಸಿತಾರಂ ಸರ್ವೇಷಾಂ...ಹೃದಿಸ್ಥಿತ ಎಂದೂ ಗೀತೆಯಲ್ಲಿ ಸರ್ವಭೂತಸ್ಥಮಾ ತ್ಮಾನಂ, ಈಶ್ವರಸ್ಸರ್ವಭೂತಾನಾಂ ಹೃದ್ದೇ ಶೇऽರ್ಜುನ ತಿಷ್ಠತಿ, ಮಯಿ ಸರ್ವಮಿದ ಪ್ರೋತಂ ಎಂದೂ ಅಹಮಾತ್ಮಾ ಗುಡಾಕೇ ಸರ್ವ ಭೂತಾಶಯಃ ಸ್ಥಿತಃ ಎಂದೂ ದಿವ್ ಪ್ರಬಂಧಗಳಲ್ಲಿ ಅಡಿಯೇನುಳ್ಳ್ ಎಂದು ಎಂಗುಮುಳ್ಳ್ ಎಂದೂ ಇತ್ಯಾದ್ಯನೇ ಪ್ರಮಾಣಗಳಿವೆ.

ಪರಬ್ರಹ್ಮನೇ ಜಗತ್ತಿಗೆ ಪತಿ ಎಂಬ ದಕ್ಕೆ ಪ್ರಮಾಣಗಳು:– ವೇದದಲ್ಲಿ ಪತಿ ವಿಶ್ವಸ್ಯ ಆತ್ಮೇಶ್ವರಗ್ಂ ಎಂದೂ ಉಪನಿಷತ್ತುಗಳಲ್ಲಿ ಪ್ರಧಾನ ಕ್ಷೇತ್ರಜ್ಞ ಪತಿಃ ಗಣೇಶಃ (ಪ್ರಕೃತಿಗೂ ಜೀವನಿಗೂ ಅಧಿಪತಿಯಾಗಿ ಗುಣ ವಿಶಿಷ್ಟನಾಗಿರುವನು) ಎಂದೂ ಕ್ಷರಾತ್ಮನಾ ವೀಶತೇ ದೇವವಾಕ (ಒಬ್ಬನೇ ದೇವ ಕ್ಷರಾತ್ಮರನ್ನು ಆಳುತ್ತಾನೆ) ಎಂದೂ, ಜ್ಞಾ ಜ್ಞಾವಜಾವೀಶನೀಶಾ (ಬ್ರಹ್ಮ ಪರಮಾತ್ಮ ಈಶ, ಆತ್ಮ ಅನೀಶ ನೊತ್ತು) ಎಂದೂ, ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಂ ಎಂದೂ, ಪತಿಂ ವಿಶ್ವಸ್ಯಾತ್ಮೇಶ್ವರಗ್ಂ ಶಾಶ್ವತಗ್ಂ ಶಿವ ಮಚ್ಯುತಂ ಎಂದೂ ಮನುಸ್ಮೃತಿಯಲ್ಲಿ ಪ್ರಶಾಶಿತಾರಂ ಸರ್ವೇಷಾಂ ಎಂದೂ, ಶ್ವೇತಾಶ್ವತರಉಪನಿಷತ್ತಿನಲ್ಲಿ ತಮೀಶ್ವ-ರಾಣಾಂ ಪರಮಂ ಮಹೇಶ್ವರಂ ಎಂದೂ ಅಲ್ಲೇ ಪತಿಂ ಪತೀನಾಂ ಎಂದೂ ಘೋಷಿ ಸಲ್ಪಟ್ಟಿದೆ.

ಭಗವಂತನೊಬ್ಬನೇ ಪುರುಷ ಎಂಬುದಕ್ಕೆ ಪ್ರಮಾಣಗಳು:- ಸಹಸ್ರ ಶೀರ್ಷಾ ಪುರುಷಃ ಎಂದು ಪುರುಷ ಸೂಕ್ತದಲ್ಲೂ, ಪುರುಷಂ ಶಾಶ್ವತಂ ದಿವ್ಯಂ ಎಂದು ಗೀತೆಯಲ್ಲೂ, ಛಾಂದೋಗ್ಯದಲ್ಲಿ ಹಿರಣ್ಮಯಃ ಪುರುಷಃ ತಸ್ಮಿನ್ ಅಗಂ ಪುರುಷೋ ಮನೋಮಯಃ ಎಂದೂ, ಮತ್ತೆ ಸ್ಮೃತಿಯಲ್ಲಿ ಸ ಏವ ವಾಸುದೇವೋಽಸೌ ಸಾಕ್ಷಾತ್ಪುರುಷ ಉಚ್ಯತೇ, ಸ್ತ್ರೀ ಪ್ರಾಯ ಮಿತರತ್ ಸರ್ವಂ ಜಗತ್ಸ್ಥಾವರ ಜಂಗಮಂ ಎಂದೂ ಉಕ್ತವಾಗಿವೆ.

ಪ್ರಪಂಚವೆಲ್ಲಾ ಭಗವಂತನ ಶರೀರ ಎಂಬುದಕ್ಕೆ ಪ್ರಮಾಣಗಳು:- ವಿಷ್ಣು ಪುರಾಣದಲ್ಲಿ ಜಗತ್ಸರ್ವಂ ಶರೀರಂ ತೇ, ತತ್ಸರ್ವಂ ವೈ ಹರೇಃ ತನುಃ, ತಾನಿ ಸರ್ವಾಣಿ ತದ್ವಪುಃ, ಯಸ್ಯ ಪೃಥಿವೀ ಶರೀರಂ (ಬೃ. ಆ.) ಯಸ್ಯ ಆತ್ಮಾ ಶರೀರಂ (ಬೃ. ಆ.)

ಆತ್ಮ-ಪರಮಾತ್ಮರ ಸಂಬಂಧಗಳನ್ನು ಹೇಳುವ ಪ್ರಮಾಣಗಳು:- ಪೂರ್ವ ಮೀಮಾಂಸೆಯಲ್ಲಿ ಶೇಷಃ ಪರಾರ್ಥತ್ವಾತ್ ಎಂದೂ, ವೇದಾರ್ಥ ಸಂಗ್ರಹದಲ್ಲಿ ಪರಗತಾತಿಶಯಾ ಧಾನೇಚ್ಛಯಾಥಾ ಉಪಾದೇಯತ್ವಮೇವ ಯಸ್ಯ ಸ್ವರೂಪಂ ಸಶೇಷಃ, ಪರಃ ಶೇಷೀ ಎಂದೂ ಭಗವದ್ಗೀತೆಯಲ್ಲಿ ಪಿತಾಮಹಸ್ಯ ಜಗತಃ ಮಾತಾಧಾತಾ ಪಿತಾಮಹಃ ಗತಿರ್ಭರ್ತಾ ಪ್ರಭುಃ ಸಾಕ್ಷೀ ನಿವಾಸಃ ಶರಣಂ, ಸುಹೃತ್, ಪ್ರಭವಃ, ಪ್ರಲಯಂ, ಸ್ಥಾನಂ, ನಿದಾನಂ, ಬೀಜಂ, ಅವ್ಯಯಂ-ಎಂಬುದಾಗಿಯೂ ಸಕಲವಿಧ ಬಂಧುವೂ ಅವನೇ ಎಂದು ಸ್ಪಷ್ಟಪಡಿಸಲ್ಪಟ್ಟಿದೆ.

ಶ್ರುತಿಸ್ಮೃತಿ ಇತಿಹಾಸ ಪುರಾಣಗಳೆಲ್ಲವೂ ಭಗವಂತನೇ ಸೃಷ್ಟಿ, ಸ್ಥಿತಿಲಯಕರ್ತಾ, ಅಂತರ್ಯಾಮಿ, ಪುರುಷ, ಶೇಷಿ, ಸರ್ವವಿಧ ಬಂಧು ಎಂದು ಅವನ ಸ್ವಾಮಿತ್ವ ಲಕ್ಷಣಗಳನ್ನು ಘೋಷಿಸಿ ಆತ್ಮನು ಅವನಿಗೆ ಸೇರಿದವನೆಂದೂ, ಅವನ ಸೊತ್ತೆಂದೂ, ಶರೀರವೆಂದೂ ಹೇಳಿದ್ದಾರೆ. ಮುಂದೆ ಆತ್ಮನ ವಿಷಯದಲ್ಲಿ ಪ್ರಮಾಣಗಳನ್ನು ಪರಿಶೀಲಿಸಬೇಕಾಗಿದೆ.

ಮೇಲಿನ ವೇದಾದಿ ಪ್ರಮಾಣಗಳಿಂದ ನಿರ್ಧರಿಸಲ್ಪಟ್ಟಂತೆ ಆತ್ಮನು ಪರಮಾತ್ಮನಿಂದ. ಅನಯುನಾದಿ ದಾಸದಿಂದ ಸ್ಥೂಲ ರೂಪವನ್ನು ತೊಟ್ಟು ಸೃಷ್ಟಿಸಲ್ಪಟ್ಟು ಸಂರಕ್ಷಿಸಲ್ಪಟ್ಟ ಅವನು ಕರ್ಮಾನುಗುಣವಾಗಿ ಸಾಗಲು ಅವಕಾಶಕೊಟ್ಟು, ತಾನು ಸರ್ವೇಶ್ವರನೆಂದೂ. ಸ್ವಾಮಿ ಎಂದೂ ತಿಳಿಸಿ, ಆತ್ಮನು ತನ್ನ ಉದ್ಧಾರಕ್ಕಾಗಿ ಏನುಮಾಡಬೇಕೆಂಬುದನ್ನು ಸಂಬಂಧ ಸೂಚಕದಿಂದ ತಿಳಿಸಿರುವುದಾಗಿ ತಿಳಿಯಲವಕಾಶವಾಯಿತು.

ಇನ್ನು ಆತ್ಮನ ವಿಷಯವಾಗಿ ಸೂಚಿಸಿರುವ ಪ್ರಮಾಣಗಳು ಯಾವುವೆಂದು ವೇದ ಪ್ರಾಮಾಣ್ಯಾದಿಗಳಿಂದಲೇ ತಿಳಿಯಬೇಕು. ಮೇಲಿನ ಎಲ್ಲಾ ಪ್ರಮಾಣಗಳಿಂದ ಪರಮಾತ್ಮನೇ ಆತ್ಮನಿಗೆ ಸ್ಥೂಲ ರೂಪ ಕೊಟ್ಟು ರಕ್ಷಿಸಿ, ಅಧೀನದಲ್ಲಿಡಲು ಪ್ರಯತ್ನಿಸುತ್ತಿರುತ್ತಾನೆ, ಆದರೆ 'ರಕ್ಷಾಪೇಕ್ಷಾಂ ಪ್ರತೀಕ್ಷತೇ' ಎಂಬಂತೆ ಒಂದುಸಲ ರಕ್ಷಣೆಗಾಗಿ ಕರೆಬರಲಿ ಎಂದು ಕಾಯುತ್ತಿರುತ್ತಾನೆ. ಹಾಗೆ ಕರೆದ ಅಧಿಕಾರಿಯು ಸರ್ವ ಭಾರವನ್ನು ಭಗವಂತನ ಮೇಲೆ ಹಾಕಿ ನಿಶ್ಚಿಂತನಾಗಿ ಸತ್ಕರ್ಮನಾಗಿ ಶರಣಾಗತನಾದರೆ ಸಾಕು, ಎಂಬುದೇ ಎಲ್ಲ ವೇದಸಾರ, ಸ್ಮೃತಿಸಾರ, ಪುರಾಣೇತಿಹಾಸಗಳ ಸಾರ. ಆತ್ಮದಾಸ್ಯಂ ಹರೇಸ್ಸ್ವಾಮ್ಯಂ ಸ್ವಭಾವಂ ಚ ಸದಾ ಸ್ಮರ ಎಂಬ ವಾಕ್ಯ ಆತ್ಮನು ಹೇಗಿರಬೇಕೆಂದು ಸೂಚಿಸುತ್ತದೆ. ಎಲ್ಲ ಕಾಲದಲ್ಲೂ ಭಗವಂತನು ಸ್ವಾಮಿ ಎಂಬುದನ್ನು ಆತ್ಮನು ನೆನಪಿಟ್ಟುಕೊಂಡು ತನ್ನ ದಾಸ್ಯವನ್ನೂ ನೆನೆಯುತ್ತಾ ಅವನ ಕೈಂಕರ್ಯದಲ್ಲಿ ನಿರತನಾಗಿರಬೇಕು ಎಂಬುದು ಸಾರಾರ್ಥ.

ಈಗ ಇನ್ನೊಂದು ವಿಷಯ ಯೋಚಿಸಬೇಕಾಗುತ್ತದೆ. ಮನು ಧರ್ಮಶಾಸ್ತ್ರದಲ್ಲಿ ಸೇವಾ ಸ್ವವೃತ್ತಿರಾಖ್ಯಾತಃ ಎಂಬ ಮಾತು ಬರುತ್ತದೆ. ಅಂದರೆ ಸೇವೆ ಮಾಡುವುದು ನಾಯಿಪಾಡು ಎಂದು. ಆದು ಲೋಕದ ಅನುಭವದಲ್ಲೂ ಕಾಣುತ್ತೇವೆ. ಆದರೆ ಮತ್ತೊಂದನುಭವವನ್ನೂ ನಾವು ಕಾಣುತ್ತೇವೆ. ತನಗೆ ಪ್ರಿಯವಾದವನ ಅಥವಾ ಪ್ರಿಯಳಾದವಳ ವಿಷಯದಲ್ಲಿ ಮನುಷ್ಯನ ವರ್ತನೆ ಹೇಗಿರುತ್ತದೆ ಎಂದು ಪರಿಶೀಲಿಸಿದರೆ ಗೊತ್ತಾಗುತ್ತದೆ. ಪ್ರಿಯವಾದ ಮಗುವಿನ ವಿಷಯದಲ್ಲಂತೂ ಸಕಲ ಸೇವೆಯೂ ಆಗತ್ಯವೇ. ಮಗುವು ಎದ್ದಾಗಿನಿಂದ ಹಿಡಿದು ರಾತ್ರಿ ಮಲಗುವವರೆಗೂ ತಾಯಿ ಎಷ್ಟು ಸೇವೆಮಾಡಿದರೂ ಅದು ಅವಳಿಗೆ ಹಿತವಾಗಿಯೇ ಇರುತ್ತದೆ. ಇನ್ನು ಮನೆಗೊಬ್ಬ ಪ್ರಿಯ ಅತಿಥಿ ಬಂದರಂತೂ ತೀರಿತು. ಅವನಿಗೆ ಸಕಲ ವಿಧ ಉಪಚಾರಗಳನ್ನೂ ಮಾಡುತ್ತಾ ಊಟ ಇತ್ಯಾದಿಗಳಲ್ಲಿ ಎಷ್ಟು ಶ್ರಮವಾದರೂ, ಅದನ್ನು ಪರಿಗಣಿಸದೇ, ಅವರನ್ನು ಸುತ್ತಮುತ್ತಲ ನೋಡತಕ್ಕಂತಹ ಪ್ರದೇಶಗಳಿಗೆ ಕರೆದೊಯ್ದು ಅಲ್ಲಿಯೂ ಅನೇಕವಾಗಿ ಉಪಚರಿಸಿ, ಅವರು ತೃಪ್ತರಾದಾಗ ತಾವೂ ತೃಪ್ತರಾಗಿ, ಅವರನ್ನು ಕಳಿಹಿಸಿಕೊಡುವಾಗ ಅವರು ಔಪಚಾರಿಕವಾಗಿ ತಮಗೆ ತೊಂದರೆ ಕೊಟ್ಟೆ ಎಂದಂತೆ ಅದನ್ನು ತಡೆದು ಸಂತೋಷದಿಂದ ಬೀಳ್ಕೊಟ್ಟು ಸಮಾಧಾನದಿಂದ ಆನಂದ ಹೊಂದುವುದನ್ನು ಲೋಕರೂಢಿಯಲ್ಲೂ ಕಂಡಿದ್ದೇನೆ. ಇವಷ್ಟೂ ತಮಗೆ ಅತ್ಯಂತ ಪ್ರಿಯರಾದವರ ವಿಷಯದಲ್ಲಿ. ಆಗ ಸೇವೆ, ನಾಯಿಪಾಡು ಎಂಬುದು ಇರುವುದೇ? ಎಂದಿಗೂ ಇಲ್ಲ. ಹಾಗೆಯೇ ತನಗೆ ಜನ್ಮಾದಿಗಳ ಕಾರಣಭೂತವಾಗಿ, ರಕ್ಷಕನಾಗಿ, ಸ್ವಾಮಿಯಾಗಿರುವವನಿಗೆ ತಾನು ಹೇಗಿರಬೇಕೆಂಬುದನ್ನು ಆಚಾರ್ಯಮುಖೇನ ಅರಿತುಕೊಂಡು ಆದರಂತೆ ವರ್ತಿಸುವವನಿಗೆ ಸದ್ಗತಿ ಉಂಟಾಗುತ್ತದೆ ಎಂದು ಶಾಸ್ತ್ರಗಳು ಘೋಷಿಸುತ್ತಿವೆ

ಶ್ರೀಶಾಸ್ತ್ರದಲ್ಲಿ ಯೇಬ್ರಹ್ಮನ್ ಭಗವದ್ದಾಸ್ಯ ಭೋಗೈಕನಿರತಾಸ್ಸದಾ, ತೇ ಪ್ರಿಯಾತಿಥಯಃ ಪ್ರೋಕ್ತಾಃ ಶ್ರೀವೈಕುಂಠನಿವಾಸಿನಾಂ-ಎಂದು ಭಗವಂತನ ಕೈಂಕರ್ಯ ನಿರತರು ಪರಮ ಪದದ ನಿತ್ಯಮುಕ್ತರಿಗೆ ಪ್ರಿಯವಾದ ಅತಿಥಿಗಳಾಗುವರು ಎಂದಿದೆ. ರಾಮಾಯಣದಲ್ಲಿ ಸೀತಾದೇವಿ, ರಾಮನು ವನವಾಸಕ್ಕೆ ಹೊರಡುವ ವಿಷಯ ತಿಳಿಸಿದಾಗ ತಾನೂ ಬರುವನೆಂದೂ, ಕಾಡಿನಲ್ಲಿ ನಡೆಯುವಾಗ ದಾರಿಯಲ್ಲಿ ಚೂಪಾದ ದರ್ಭೆ, ಮುಳ್ಳು ಇತ್ಯಾದಿಗಳನ್ನು ತೆಗೆದುಹಾಕುತ್ತಾ ನಿಮಗೆ ಮುಂದಾಗಿ ಹೋಗುತ್ತೇನೆ ಎಂದೂ ಅಗ್ರತಸ್ತೇಗಮಿಷ್ಯಾಮಿ ಮೃದ್ನಂತೀ ಕುಶಕಂಟಕಾನ್ – ಎಂದು ಹೇಳುವುದನ್ನು ಕಾಣಬಹುದು. ಅಲ್ಲಿಯೇ ತಮ್ಮನಾದ ಲಕ್ಷ್ಮ

ಣನೂ ಅಹಂ ಸರ್ವಂ ಕರಿಷ್ಯಾಮಿ ಜಾಗ್ರತಃ ಸ್ವಪತಶ್ಚ ತೇ ಎಂದು ನಿಮ್ಮ ಸೇವೆ ಮಾಡುತ್ತಾ ಆನಂದ ಹೊಂದುತ್ತೇನೆ ಎನ್ನುತ್ತಾನೆ, ಮತ್ತೆ ಗುಣೈಃ ದಾಸ್ಯ ಮುಪಾಗತಃ ಎಂದು ಆಂಜನೇಯನಿಗೆ-ನಾನು ಇವನ ಗುಣಗಳಿಗೆ ಸೋತು ದಾಸನಾಗಿದ್ದೇನೆ. ಇಲ್ಲಿ ರಾಮನಿಗೆ ತಾನು ತಮ್ಮ ಎನ್ನುವುದಕ್ಕಿಂತ ದಾಸನಾಗಿರುವುದು ಅವನಿಗೆ ಇಷ್ಟವಾದ ಕೆಲಸವಾಗಿರುವುದನ್ನು ಕಾಣುತ್ತೇವೆ. ದಿವ್ಯ ಪ್ರಬಂಧಗಳು ಅಡಿಯೇನುಳ್ಳಾರ್ವ, ಉಮಕ್ಕೇ ನಾಮಳ್ ಶೈಯ್ಯೋಂ, ನಾನು ಮುನಕ್ಕು ಪಳವಡಿಯೇರ್, ಕುತ್ತೇವ ಲಿಂಗಳೈ ಕೊಳ್ಳಾಮಲ್ ಪೋಕಾದು, ಕೋಳುದೆಳು ಎನ್ನ ನನ್ನೇ, ಎಂದು ಭಗವಂತನ ಸೇವೆಯೇ ತಮಗೆ ಅತ್ಯಂತ ಹಿತವೆಂದು ಹೇಳಿದ್ದಾರೆ. ಶ್ರೀ ಆಳವಂದಾರರು ನ ದೇಹಂ ನ ಪ್ರಾಣಾನ ಚ ಸುಖ ಮಶೇಷಾಭಿಲಷಿತಂ, ನ ಚಾ ತ್ಮಾನಂ ನಾನ್ಯತ್ಕಿಮಪಿ ತವ ಶೇಷತ್ವ ವಿಭವಾತ್ ಬಹಿರ್ಭೂತಂ ನಾಥ ಕ್ಷಣಮಪಿ ಸಹೇ ಎಂದರೆ ನಿನ್ನ ಶೇಷತ್ವಕ್ಕೆ ಬಹಿರ್ಭೂತವಾದ ದೇಹ, ಪ್ರಾಣ ಸುಖ, ಸಕಲ ಇಷ್ಟಗಳು, ಆತ್ಮವೂ ಕೂಡ ನನಗೆ ಬೇಕಾಗಿಲ್ಲ ಎಂದು ಹೇಳುತ್ತಾ ತವ ದಾಸ್ಯ ಸುಖೈಕಸಂಗಿನಾಂ ಭವನೇಷ್ವಸ್ತ್ವಪಿ ಕೀಟಜನ್ಮ ಮೇ-ನಿನ್ನ ಭಕ್ತರ ಮನೆಯಲ್ಲೊಂದು ಕೀಟವಾಗಿಯಾದರೂ ನನಗೆ ಇಷ್ಟ ಎನ್ನುವಷ್ಟರ ಮಟ್ಟಿಗೆ ತಮ್ಮ ಭಕ್ತಿ ಪ್ರಾಧಾನ್ಯತೆಯನ್ನು ವ್ಯಕ್ತ ಪಡಿಸುತ್ತಾರೆ.

ಆಚಾರ್ಯ ರಾಮಾನುಜರು ತಮ್ಮ ಶರಣಾಗತಿ ಗದ್ಯದಲ್ಲಿ ಭಗವದನುಭವಜನಿತ ಅನವಧಿಕ ಅತಿಶಯ. ಪ್ರೀತಿ ಕಾಂತಾಶೇಷಾವಸ್ಥೋಚಿತಾ ಶೇಷತ್ವೈಕ ರತಿರೂಪ ನಿತ್ಯ ಕೈಂಕರ್ಯ ಪ್ರಾಪ್ತ್ಯಪೇಕ್ಷಯಾ ಎಂದೂ ಶ್ರೀರಂಗಗದ್ಯದಲ್ಲಿ, ನಿತ್ಯಕಿಂಕರೋಭವಾನಿ ಎಂದೂ, ನಿತ್ಯಕಿಂಕರತಾಂ ಪ್ರಾರ್ಥಯೇ, ಎಂದೂ, ಶ್ರೀವೈಕುಂಠಗದ್ಯದಲ್ಲಿ, ತತ್ಪಾದಾಂಬುಜದ್ವಯ ಪರಿಚಯೈ್ಯಕ ಮನೋರಥಃ ಪುನರಪಿ ಶೇಷಭಾವ ಮೇ ವ ಯಾಚಮಾನಃ ಭಗವಂತಮೇವ ಅವಿಚ್ಛಿನ್ನ ಸ್ರೋತೋರೂಪೇಣಾವಲೋಕಯನ್ನಾಸೀತ ಎಂದು ಭಗವಂತನ ಶೇಷಿತ್ವವನ್ನೂ ತಾನು ಶೇಷಭೂತನೆಂದೂ ವ್ಯಕ್ತವಾಗಿ ತಿಳಿಸಿ ಪ್ರಾರ್ಥಿಸಿಕೊಂಡಿದ್ದಾರೆ.

ಇದರಿಂದ ಸಿದ್ಧವಾಗುವುದೇನಂದರೆ ಸಕಲ ಕಾರಣ ಭೂತನಾದ ಶ್ರಿಯಃ ಪತಿಯೇ ಪರದೈವವೆಂದೂ, ಅವನೇ ಆತ್ಮವರ್ಗಕ್ಕೆಲ್ಲಾ ಶರಣ್ಯನೆಂದೂ, ಅವನು ಶರಣಾಗತವತ್ಸನಾಗಿ, ರಕ್ಷಾಪೇಕ್ಷಿಯಾಗಿದ್ದು, ಕರೆದಾಗ ಗೊಟ್ಟು ಇವನನ್ನುದ್ಧರಿಸುವನೆಂದ. ಆತ್ಮನು ತಾನು ಭಗವಂತನ ಸೊತ್ತು ಎಂ[illegible] ದನ್ನು ಮನಸ್ಸಿನಲ್ಲಿ ಅನುಸಂಧಾ[illegible] ಮಾಡುತ್ತಾ ಅವನ ಸ್ವಾಮಿತ್ವವನ್ನು ಒ[illegible] ಕೊಂಡು ನಿರಂತರವೂ ಒಳಿವಿಲ್ ಕಾಲ[illegible] ಲ್ಲಾಂ ಉಡನಾಯ್ ಮನ್ನಿ ಒಳಿವ[illegible] ಅಡಿಮೈ ಶೈಯ್ಯವೇಂಡುಂ ನಾಂ ಎಂ[illegible] ನಮ್ಮಾಳ್ವಾರರು ಅನುಗ್ರಹಿಸಿದಂತೆ ಭ[illegible] ವಂತನ ಕೈಂಕರ್ಯವನ್ನು ಸರ್ವದೇ[illegible] ಸರ್ವಕಾಲ ಸರ್ವಾವಸ್ಥೆಗಳಲ್ಲೂ ಮಾ[illegible] ವುದೇ ಆತ್ಮನಿಗೆ ಸ್ವರೂಪಾನುರೂಪವಾ[illegible] ಕರ್ತವ್ಯ ಎಂದೂ ತಿಳಿದು ಜ್ಞಾನಾನಂ[illegible] ಮಯ ಸ್ವಾತ್ಮಾತ್ಮಾಶೇಷೋಹಿ ಪರಮ[illegible] ತ್ಮನಃ ಎಂದೂ, ದಾಸ್ಯ ಮಹಾರಸಜ್ಞ[illegible] ದಾಸ್ಯ ಸುಖೈಕ ಸಂಗಿನಾಂ ಎಂದ[illegible] ಸ್ವಾತೋಕ್ತಿದ್ಧಾರವನ್ನು ಅವನಿಗೆ ಒಪ್ಪಿ[illegible] ತಾನು ನಿರ್ಭರೋ ನಿರ್ಭಯೋಸ್ಮಿ ಎಂದ[illegible] ನಿರ್ಭರದಿಂದ ನಿರ್ಭಯವಾಗಿ ಕಾಲಕ[illegible] ಯುತ್ತಾ ಆತ್ಮಾಪಹಾರ ಎಂಬುದು ಮಹ[illegible] ಪರಾಧವೆಂದು ತಿಳಿದು ವರ್ತಿಸಬೇಕೆಂ[illegible] ತಿಳಿಯಬೇಕು.

# ಪರಮಹಂಸ ಸಂಹಿತೆ

ದ್ವಾಪರಯುಗದ ಕೊನೆಯಭಾಗದ ಒಂದು ಸಂಧ್ಯಾಸಮಯ. ಪುಣ್ಯನದಿ ಸರಸ್ವತಿಯಲ್ಲಿ ಮಿಂದು ಭಗವಾನ್ ಭಾಸ್ಕರನಿಗೆ ಅರ್ಘ್ಯ ಪ್ರದಾನ ಮಾಡಿ, ಜಪತಪಾದ್ಯನುಷ್ಠಾನಗಳನ್ನೆಲ್ಲ ಮುಗಿಸಿಕೊಂಡು ಬದರಿಕಾಶ್ರಮದ ಹತ್ತಿರ, ರಮ್ಯ ರಜತಾದ್ರಿಯ ತುಷಾರಧೌತಭೀಮಭೂರುಹುಗಳನ್ನೇ ನೋಡುತ್ತ, ನಾನು ಸುಮ್ಮನೆ ಕುಳಿತಿದ್ದೆ. ತ್ರಿಕಾಲ ಜ್ಞಾನ ಸಂಪನ್ನನಾದ ನನ್ನ ಸ್ಮೃತಿಪಥದಲ್ಲಿ ನೂರಾರು ಸಾವಿರಾರು ಸಂಗತಿಗಳು ಸಾಲುಗಟ್ಟಿ ಮೆರವಣಿಗೆ ಹೊರಟಂತೆ ಭಾಸವಾಗುತ್ತಿತ್ತು. ಇನ್ನೇನು ದ್ವಾಪರಯುಗ ಮುಕ್ತಾಯವಾಗಲಿದೆ. ನಂತರ ಬರುವುದು ಕಲಿಯುಗ. ಆಗ ಜನ ಕ್ರಮೇಣ ಸತ್ತ್ವಹೀನರಾಗಿ, ಧೈರ್ಯಶೂನ್ಯರಾಗಿ, ಅಲ್ಪಾಯುಷ್ಯದವರಾಗಿ, ಮಂದಪ್ರಜ್ಞರಾಗಿ ಹೋಗುತ್ತಾರೆ. ಹೀಗಾದ ಮೇಲೆ ವೇದಾಧ್ಯಯನ ಸಂಪನ್ನರಾದ ಜನ ಅಪರೂಪವಾಗುವುದರಲ್ಲಾಶ್ಚರ್ಯವಿಲ್ಲ. ಸಕಲವೇದ ಸಾರವಾಗಿ, ಪಂಚಮವೇದವೆಂಬ ಕೀರ್ತಿ ಪಡೆದ ಮಹಾಭಾರತ ಗ್ರಂಥವನ್ನು ಆ ವೇಳೆಗೆ ನಾನು ಬರೆದು ಮುಗಿಸಿದ್ದೆ. ಅಷ್ಟಾದಶ ಪುರಾಣಗಳನ್ನು ರಚಿಸಿ ಮುಗಿಸಿದ್ದೆ. ನನಗೆ ಲಭಿಸಿದ್ದ ಶಿಷ್ಯ ಸಂಪತ್ತು ಅಪಾರವಾಗಿತ್ತು. ಅವರಲ್ಲಿ ಮಹಾಪ್ರತಿಭಾವಂತರಾದ ಪೈಲ-ಜೈಮಿನಿ-ವೈಶಂಪಾಯನ- ಸುಮಂತ ಎಂಬುವರಿಗೆ ಕ್ರಮವಾಗಿ ಋಗ್ವೇದ, ಸಾಮವೇದ, ಯಜುರ್ವೇದ, ಅಥರ್ವಣವೇದ-ವನ್ನು ಸಕ್ರಮವಾಗಿ ಬೋಧಿಸಿ ಆಯಾ ವೇದಗಳಿಗವರು ಅಧಿಕಾರಿಗಳಾಗುವಷ್ಟರ ಮಟ್ಟಿಗೆ ಅವರನ್ನು ತಯಾರುಮಾಡಿದ್ದೆ. ಪರಾಶರ ಸತ್ಯವತೀ ಪುತ್ರನಾದ ನಾನು ಸಾಕಷ್ಟು ತಪಸ್ಸು ಮಾಡಿದ್ದೆ. ಬ್ರಹ್ಮನಿಷ್ಠಾಗರಿಷ್ಠನಾಗಿ ಬಾಳಿದ್ದೆ, ನಾನು ಮಾಡದ ಸಾಧನೆ ಇಲ್ಲ, ನಾನು ಓದದ ಗ್ರಂಥವಿಲ್ಲ-ರಚನೆಮಾಡದ ಗ್ರಂಥವಿಲ್ಲ, ನನ್ನ ಪ್ರತಿಭೆಗೆ ಅಗೋಚರವಾದ ವಿಚಾರವಿಲ್ಲ – ಎಂಬಂತೆ ವಿಶಾಲ ಬುದ್ಧಿ ಸಂಪನ್ನನಾಗಿ ಸಮಾನಾನಾಂ ಉತ್ತಮ ಶ್ಲೋಕೋ ಅಸ್ತು – ಎಂಬಂತೆ ಬಾಳಿಬದುಕಿದ್ದೆ. ಇಷ್ಟೆಲ್ಲ ಆದರೂ ನನ್ನ ಮನಸ್ಸಿನಲ್ಲೇನೂ ಕೊರತೆ ಏನೋ ಕೊರಗು ಬಾಧಿಸುತ್ತಲೇ ಇತ್ತು.

ವಿದ್ಯೆ, ವಿವೇಕ, ಸ್ಥಾನ-ಮಾನ, ಐಶ್ವರ್ಯ ಇತ್ಯಾದಿ ಮಹತ್ವಪೂರ್ಣವಾದ ನೂರಾರು ವಿಚಾರಗಳಿರಬಹುದು. ಆದರೆ ಮನಶ್ಶಾಂತಿ ಎಂಬುದು ಇವೆಲ್ಲಕ್ಕಿಂತಲೂ ದೊಡ್ಡದು. ಆ ನೆಮ್ಮದಿ ನನ್ನ ಜೀವನದಲ್ಲಿನ್ನೂ ಬಂದಿರಲಿಲ್ಲ. ಇದಕ್ಕೇನು ಕಾರಣ? ಈ ಪ್ರಶ್ನೆ ನನ್ನನ್ನು ಕೊರೆಯುತ್ತಲೇ ಇತ್ತು. ಅದೇ ವಿಚಾರ ಯೋಚಿಸುತ್ತ ಹಿಮಾಚಲದಲ್ಲಿ ಸುಮ್ಮನೆ ಕುಳಿತಿದ್ದೆ. ಈಗ ಅರ್ಥವಾಯ್ತೇ ನಾನಾರೆಂದು? ನನ್ನ ಹೆಸರು ಸಾತ್ಯವತೇಯ –ವೇದವ್ಯಾಸ. ಏಕಾಂತ ಚಿನ್ತನದಿಂದ ಜೀವನದ ಹಲವಾರು ಸಮಸ್ಯೆಗಳಿಗೆ ಸೂಕ್ತ ಪರಿಹಾರ ಕಂಡುಬರುತ್ತದೆ. ಬಹುಶಃ ಆಗ ಯಾರಮೂಲಕ ಅಥವ ಯಾವುದರ ಮೂಲಕ ಪರಿಹಾರ ದೊರೆಯುತ್ತದೆ ಅವರನ್ನು ಅಥವ ಆ ವಸ್ತುವನ್ನು ಸಾಮಾನ್ಯ ಜನರು ದೇವರು ಎಂದು ಕರೆಯುತ್ತಾರೆ. ವೇದಾಂತಿಗಳು ಅನ್ತರಾತ್ಮ ಎಂದು ಕರೆಯುತ್ತಾರೆ. ಅಥವ ಸಮಸ್ಯಾಪರಿಹಾರಕ್ಕೆ ಯಾವ ಮಹನೀಯರಾದರೂ ಆ ಕಾಲಕ್ಕೆ ದೈವಯೋಗದಿಂದ ತಾನಾಗಿ ಒದಗಿ ಬರುತ್ತಾರೆ. ಅವರನ್ನು ಗುರುಗಳೆಂದರಾಯ್ತು. ಭಗವತ್ ಸ್ವರೂಪಿಗಳು ಎಂದರೂ ಸರಿ.

ನಾನು ಬದರಿಕಾಶ್ರಮದಲ್ಲಿ ಯೋಚಿಸುತ್ತ ಕುಳಿತಿದ್ದೆನಷ್ಟೆ. ಆಗ ಯಾವುದೊ ಒಂದು ದಿವ್ಯ ತೇಜೋಲಹರಿ ಗಗನದಿಂದ ಧರೆಗಿಳಿದಂತಾಯ್ತು. ಮರುಕ್ಷಣದಲ್ಲಿ ಮಾನವಾಕಾರ ತಾಳಿತು ಮತ್ತು ಆ ತೇಜೋವಿರಾಜಮಾನ ವ್ಯಕ್ತಿ ನನ್ನ ಹತ್ತಿರಕ್ಕೇ ಗಂಭೀರವಾಗಿ ಬರತೊಡಗಿತು. ಆತ ಯಾರೂ ಗೊತ್ತೇ? ಆತ ತ್ರಿಲೋಕಸಂಚಾರಿ ತ್ರಿಕಾಲಜ್ಞಾನಿ, ಮಹತೀ ವೀಣಾವಾದಕ, ನಿರಂತರ ಹರಿನಾಮ ಜಪಿಸುವಾತ. ಭಗವದ್ಧ್ಯಾನ ಪರಾಯಣಮತ್ತಚಿತ್ತ, ತುಲಸೀ ದಾಮ ಭೂಷಿತ, ನಯವಿಶಾರದ ನಾರದಾಗಮನದಿಂದ ನನಗೆ ಹಿಡಿಸಲಾರದ ಹಿಗ್ಗು. ದೇವರ್ಷಿಗಳ ದರ್ಶನವೇ ಒಂದು ಪರಮ ಸೌಭಾಗ್ಯ:

ಬ್ರಹ್ಮಮಾನಸ ಪುತ್ರರನ್ನು ಶ್ರದ್ಧಾಭಕ್ತಿಯಿಂದ ಪೂಜಿಸಿದೆ-ಗೌರವಿಸಿದೆ. ನನ್ನ ಸಾಮಾನ್ಯ ಆತಿಥ್ಯವನ್ನೇ ಬಹು ದೊಡ್ಡದೆಂದು ಭಾವಿಸಿದ ಆ ಸೌಜನ್ಯಮೂರ್ತಿ ನಾರದರು ಪರಮ ವಿಶ್ವಾಸದಿಂದ ಕುಶಲ ಪ್ರಶ್ನೆ ಮಾಡಿದರು. ಮಾತು ಕತೆಯ ಮಧ್ಯೆ ಅವರು ನನ್ನನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದಾರೆಂಬುದು ನನಗರಿವಾಯ್ತು.

ಸಾತ್ಯವತೇಯ – ನೀನು ಪಂಚಮಶ್ರುತಿ ವಿಧಾತ; ಸಕಲವೇದಾಂತ ವಿಜ್ಞಾನ ವಿಜ್ಞಾತ; ಕಾಮಾದಿ ಷಡ್ರಿಪು ವಿಜೇತ, ಬ್ರಹ್ಮ ತತ್ತ್ವ ನಿರ್ಣೇತ, ತಪೋಧನ–ಬೃಹತ್ಸಾಹಿತ್ಯ ನಿರ್ಮಾಪಕ. ಇಷ್ಟಾದರೂ ಏನೋ ಕೊರಗು ನಿನ್ನ ಕಣ್ಣಂಚಿನಲ್ಲಿ ಕಾಣಿಸುತ್ತಿದೆ– ಎಂದರೆ ತಪ್ಪಾಗಲಾರದಷ್ಟೆ? –ನಾರದರು ನೇರವಾಗಿ ಪ್ರಶ್ನಿಸಿದರು.

"ಪೂಜ್ಯರ ಊಹೆ ಎಂದಿಗೂ ತಪ್ಪಾಗಲಾರದು. ನನ್ನನ್ನು ಒಂದು ಚಿಂತೆ ಕಾಡುತ್ತಿದೆ – ನನಗೆ ಮನಶ್ಶಾಂತಿ ಇಲ್ಲ. ಅದಕ್ಕೆ ಸೂಕ್ತ ಪರಿಹಾರವನ್ನು ತಾವಲ್ಲದೆ ಇನ್ನಾರು ತಾನೆ ಸೂಚಿಸಲು ಸಾಧ್ಯ? –ಎಂದು ಧೈರ್ಯಮಾಡಿ ಹೇಳಿದೆ.

ನನ್ನ ಮಾತು ಕೇಳಿ ನಾರದರು ನಕ್ಕರು. ಯಾವುದು ಸಾಮಾನ್ಯರಿಗೆ ಸಮಸ್ಯೆಯಾಗಿ ಕಾಣುತ್ತದೆ ಅದು ಮಹಿಮಾನ್ವಿತರಿಗೆ ಸಮಸ್ಯೆಯೇ ಅಲ್ಲ– ಎಂಬಂತೆ.

"ಪಾರಾಶರ್ಯ, ನೀನು ಅನಂತ–ಅಪರಿಮಿತ ಸಾಹಿತ್ಯವನ್ನು ರಚಿಸಿರುವುದು ನಿಜ. ಮಹಾಭಾರತ ನಿನ್ನ ಕೃತಿ ಶ್ರೇಣಿಯಲ್ಲಿ ಮೌಳಿಮಣಿ ನ ಭೂತೋ ನ ಭವಿಷ್ಯತಿ ಎಂಬಂತಹ ಗ್ರಂಥ ರತ್ನವದು. ಜಗತ್ತಿಗದು ಶತಶತಮಾನಗಳಾದರೂ – ಜ್ಞಾನಮಯ ಪ್ರದೀಪ

ವಿದ್ವಾನ್ ಬ. ನ. ಗುಂಡೂರಾವ್

ವಾಗಿರುತ್ತದೆ. ಅದರಲ್ಲಿ ನೀನು ಅನೇಕ ಧರ್ಮ ಸೂಕ್ಷ್ಮಗಳನ್ನು – ಜಗಜ್ಜೀವನದ ನೀತಿ ನಿಯಮಗಳನ್ನು ಪ್ರಸ್ತಾಪಿಸಿದ್ದಿ. ಎಲ್ಲವೂ ಸರಿ. ಆದರೆ ಹರಿನಾಮ ಸಂಸ್ತುತಿ ರಹಿತವಾದ ಯಾವುದೇ ಗ್ರಂಥವಾದರೂ – ಯಾವುದೇ ಕಾವ್ಯವಾದರೂ ನಿರ್ಗಂಧ ಕುಸುಮದಂತೆ. ನೋಡಲು ಚೆನ್ನಾಗಿರಬಹುದು. ಓದಲು ಚೆನ್ನಾಗಿರಬಹುದು, ನಾನಾವಿಧ ವರ್ಣನೆಗಳಿರಬಹುದು. ಆದರೆ ಹರಿಭಕ್ತಿ ಎಂಬ ರಸವದರಲ್ಲಿಲ್ಲವೆಂದಾಗ ಕೃತಿಕಾರನಿಗೆ ಶಾಂತಿ ಸಮಾಧಾನಗಳು ಸಿಕ್ಕಲಾರದು. ಅವನ ಜೀವನ ಧನ್ಯವಾಗದು. ಹುತ್ತದಲ್ಲನೇಕ ಸರ್ಪಗಳಡಗಿರುವುದಕ್ಕೂ, ನಿರ್ಮಲ ಸರೋವರದಲ್ಲನೇಕ ರಾಜಹಂಸಗಳು ರಾಜಠೀವಿಯಿಂದ ಗಂಭೀರವಾಗಿ ಈಜಾಡುತ್ತಿರುವುದಕ್ಕೂ ವ್ಯತ್ಯಾಸವಿಲ್ಲವೇ ಸಾತ್ಯವತೇಯ? ಹೃದಯಾಂತರಾಳದಲ್ಲಿ ರಾಗದ್ವೇಷಾದಿಗಳು, ಮಾತ್ಸರ್ಯವ್ಯಾಮೋಹಗಳು ತುಂಬಿರುವುದಕ್ಕೂ ಹೃತ್ಸರೋವರದಲ್ಲಿ ಪ್ರೇಮ–ಭಕ್ತಿ – ಸೇವಾಮನೋಭಾವಗಳು ತುಂಬಿರುವುದಕ್ಕೂ ಅಂತರವಿಲ್ಲವೇನು? ಮಹಾಭಾರತದಲ್ಲಿ ತುಂಬಿರುವುದು – ಅಲ್ಲಿನ ಪಾತ್ರಗಳ ಮಾನಸಾಂತರಾಳದಲ್ಲಿ ತುಂಬಿರುವುದು ಪರಸ್ಪರ ಅಪನಂಬಿಕೆ, ಸ್ವಾರ್ಥ, ಪ್ರೇಮರಹಿತವಾದ ಒಂದು ಮಾತ್ಸರ್ಯದ ಗಂಭೀರ ಸನ್ನಿವೇಶಗಳು, ದುರಾಲೋಚನೆಗಳು– ಕ್ಷುದ್ರರಾಜಕೀಯ. ಅದು ಕೊಲೆಯ ಕಥೆ. ಮನಶ್ಶಾಂತಿಯನ್ನು ಕದಡುವ ಕಲುಷಿತ ಸಂದರ್ಭಗಳ ಚಿತ್ರಣ ಮಹಾಭಾರತದ ವೈಶಿಷ್ಟ್ಯವಾಗಿದೆ. ಆದರೂ ಅದು ನೀನು ಬರೆದಿರುವ ಧಾಟಿಯಲ್ಲಿ ಆಕರ್ಷಣೀಯವಾಗಿದೆಯೆಂಬ ವಿಚಾರ ಬೇರೆ. ಆಕರ್ಷಕ ಶೈಲಿಬೇರೆ – ಹೃತ್ತಾಪ ನಿವಾರಕ ವಸ್ತು ಬೇರೆ. ಭಗವಂತನನ್ನು ಧ್ಯಾನಿಸುವುದರಲ್ಲೇ ಆನಂದ ಕಂಡ ಪುಣ್ಯಜೀವಿಗಳ ವೃತ್ತಾಂತ ಭಾರತಗ್ರಂಥದಲ್ಲಿ ಅಷ್ಟಾಗಿ ಸಿಕ್ಕಲಾರದೆಂದು ಕೆಲವರ ಅಭಿಪ್ರಾಯವಿದೆ. ಆದ್ದರಿಂದ ಈಗ ನಿನ್ನ ಪ್ರತಿಭಾ ಪರ್ವತದಿಂದ ಮತ್ತೊಮ್ಮೆ ಹರಿಕಥಾಮೃತಧಾರೆ–ಮಂಗಳ ಮಂದಾಕಿನಿಯಂತೆ ಪ್ರವಹಿಸಲಿ. ಅದು ಲೋಕ ಮಂಗಳಕರವಾಗಿರುವುದೇ ಅಲ್ಲದೆ ಕೃತಿಕಾರನಾದ ನಿನಗೂ ಶಾಂತಿದಾಯಕವಾಗಿರುವಲ್ಲಿ ಸಂದೇಹವಿಲ್ಲ. ನಿರುಪಾಧಿಕಃ ಜ್ಞಾನವೃ ಭಕ್ತಿಯುಕ್ತವಾಗಿದ್ದ ಶೋಭಾಯಮಾನವಾಗುವುದು. ಆದ್ದ ದಿಗಂತ ವಿಶ್ರಾಂತಧವಳಕೀರ್ತಿ ಹೊಂದಿ ನೀನು ವಾಸುದೇವ ಲೀಲಾವಿಶೇಷಗಳ ವಿಪುಲವಾಗಿ ವಿವರಿಸಿ, ವರ್ಣಿಸಿ ಇನ್ನಷ್ಟು ಪ್ರಸಿದ್ಧನಾಗುವೆ. ಹರಿಪ ಯಿಂದ ಸೇವಾ ತತ್ಪರನಾದವನ ಬಾಳು ಸಕ್ಕವಾಗುವುದರಲ್ಲಿ ಸಂದೇಹವಿಲ್ಲ. ಕ ನೋಡಿದರೆ ದ್ವಂದ್ವಗಳು ಎಲ್ಲರ ಬಾಳಿನ ಇದ್ದೇ ಇದೆ. ಹರಿಚರಣಾರಾಧಕನೇ ದ್ವಂ ತೀತನಾಗಬಲ್ಲ. ಸರ್ವಂ ವಿಷ್ಣುಮಂ ಜಗತ್ – ಎಂಬ ಮಾತನ್ನು ಕೇಳಿದ್ದಿ ಯಲ್ಲವೆ? ವಿಶ್ವವೆಲ್ಲ ವಿಷ್ಣುಮಯ. ನಿಲ್ಲದ ಸ್ಥಳವಾವುದು– ಆತನಲ್ಲದ ವ ವಾವುದು? ಆತ ಸರ್ವಭೂತಾಂತರಾ ನಾದ್ದರಿಂದಲೇ ಆತನನ್ನು ವಾಸುದೆ ಎಂದು ಕರೆಯಲಾಗಿದೆ. ಸ್ಮಾರಯೇನ ಶಿಕ್ಷಯೇ–ಎಂಬಂತೆ ನೀನು ಬಲ್ಲ ವಿಚ

---

# ತಿರುಪತಿ ಯಾತ್ರಿಕರಿಗೆ ಒಂದು ಸದವಕಾಶ

ತಿರುಪತಿಗೆ ಬರುವ ಯಾತ್ರಿಕರು ಶ್ರೀ ವೆಂಕಟೇಶ್ವರಸ್ವಾಮಿಯನ್ನು ಸಂದರ್ಶಿಸಿ ತಿರುಪತಿಯ ಇತರ ದೇವಾಲಯಗಳನ್ನು ಸಂದರ್ಶಿಸಲು ಕಾಲಾವಕಾಶವಿಲ್ಲದೆ ತಮ್ಮ ಸ್ವಸ್ಥಳಗಳಿಗೆ ಹಿಂದಿರುಗುವುದನ್ನು ತಪ್ಪಿಸಲು, ಅವರಿಗೆ ತಿರುಪತಿಯಲ್ಲಿ ಹಾಗೂ ಬಳಿಯಲ್ಲಿ ಇರುವ ಮುಖ್ಯ ದೇವಾಲಯಗಳನ್ನು ತೋರಿಸಿಕೊಂಡು ಬರಲು ತಿ. ತಿ. ದೇವಸ್ಥಾನಗಳು ತಿರುಪತಿಯ ಸ್ಥಳೀಯ ದೇವಾಲಯಗಳ ಬಸ್ ಒಂದನ್ನು ಏರ್ಪಡಿಸಿದೆ. ಈ ಬಸ್‌ನಲ್ಲಿ ಹೊರಟು;

**ಶ್ರೀ ಗೋವಿಂದರಾಜಸ್ವಾಮಿ ದೇವಾಲಯ**
**ಶ್ರೀ ಕೋದಂಡರಾಮಸ್ವಾಮಿ ದೇವಾಲಯ**
**ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ, ತಿರುಚಾನೂರು**
**ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯ, ಕಪಿಲತೀರ್ಥ**
**ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ, ಶ್ರೀನಿವಾಸ ಮಂಗಾಪುರ**

ದೇವಾಲಯಗಳನ್ನು ದರ್ಶಿಸಿ ತಿರುಪತಿಗೆ ಹಿಂದಿರುಗಬಹುದು (12 ಗಂಟೆಗಳಲ್ಲಿ)

ಬಸ್ ಹೊರಡುವ ಸ್ಥಳ : ಶ್ರೀ ಗೋವಿಂದರಾಜಸ್ವಾಮಿ ಸತ್ರ (ತಿರುಪತಿ ರೈಲ್ವೆಸ್ಟೇಷನ್ ದಕ್ಷಿಣ)
ಬಸ್ ಹೊರಡುವ ಕಾಲ : ಬೆಳಗ್ಗೆ 6–00, ಬೆಳಗ್ಗೆ 10–00, ಸಂಜೆ 3–00
ಬಸ್ ಪ್ರಯಾಣದ ದರ ; ಒಂದು ಟಿಕೆಟ್ಟಿಗೆ 12 ರೂ ಮಾತ್ರ. ಕಿರಿಯರಿಗೆ ಅರ್ಧ ಟಿಕೆಟ್;
(ಇದರಲ್ಲಿ ಆಯಾ ದೇಸ್ಥಾನಗಳ ಪ್ರವೇಶದ ದರವೂ ಸೇರಿದೆ.)

ಯಾತ್ರಿಕರು ಈ ಅವಕಾಶವನ್ನು ಬಳಸಿಕೊಳ್ಳಬೇಕೆಂದು ವಿನಂತಿಸಲಾಗಿದೆ.

**ತಿ.ತಿ.ದೇ**

ವನ್ನೇ ಪುನಃ ನೆನಪಿಗೆ ತರುತ್ತಿದ್ದೇನೆ. ನೀನು ವಿಷ್ಣುಲೀಲಾ ವಿನೋದಗಳನ್ನು ಕುರಿತು ವಿಪುಲವಾಗಿ ಬರೆಯಬೇಕು. ಆ ಗ್ರಂಥ ಪರಮ ಮಂಗಳಕರವಾಗುತ್ತದೆ. ಮಧುರಾತಿ ಮಧುರವಾಗುತ್ತದೆ- ಸಕಲಭುವನ ವಿಖ್ಯಾತ ವಾಗುತ್ತದೆ. ನಿತ್ಯ ನೂತನವಾಗುತ್ತದೆ. ಹೇಳಿದವನನ್ನು – ಕೇಳಿದವನನ್ನು ಧನ್ಯ ರನ್ನಾಗಿ ಮಾಡುವ ಸಾಮರ್ಥ್ಯ ಪಡೆದಿರು ತ್ತದೆ. ರಸಭರಿತ ಪುಣ್ಯಚರಿತೆಯಾಗಿರುತ್ತದೆ. ಶತಶತಮಾನಗಳುರುಳಿದರೂ ತತ್ ಪ್ರತಿ ಪಾದಿತವಾದ ಭಕ್ತಿತತ್ತ್ವ ಜಗತ್ತಿಗೆ ಮಾರ್ಗ ದರ್ಶಕವಾಗಿರುತ್ತದೆ. ಇಂತಹ ಗ್ರಂಥ ರಚಿಸದೇ ಇದ್ದರೆ ನಿನಗೆ ಮನಶ್ಶಾಂತಿ ಖಂಡಿತವಾಗಿಯೂ ದೊರೆಯಲಾರದು. ವಿಷ್ಣುಕಥಾನಿರೂಪಣೆಯೊಂದೇ ಶಾಂತಿ ಸೋಪಾನ.

ನಾರದ ಮಹರ್ಷಿಗಳ ಮಂಜುಳ- ಮನೋಜ್ಞ ವಿಚಾರಧಾರೆ ಕೇಳುತ್ತ ಕೇಳುತ್ತ ನಾನು ಪುಲಕಿತನಾದೆ. ಅವರ ಮಾತು ಚೇತೋಹಾರಿಯಾಗಿತ್ತು. ಏಕೆಂದರೆ ಅದು ಅನುಭವಾಮೃತ. ಬ್ರಹ್ಮಾಭಿವ್ಯಂಜಕವಾದ ಅವರ ಮಹತೀವೀಣೆಯ ಪ್ರತಿ ಮೀಟಿನಲ್ಲೂ ಇದೇ ರಸ-ಇದೇ ಮಾಧುರ್ಯ, ಇದೇ ಆನಂದ ಚಿಮ್ಮುವಂತೆ ಭಾಸವಾಗುತ್ತಿತ್ತು. ಅಷ್ಟಾಂಗ ಯೋಗಸಾಧನೆ ಮಾಡಬಹುದು. ಯಾಗ ಯಜ್ಞಗಳನ್ನು ಆಚರಿಸಬಹುದು. ಯಾರೇನೇ ಮಾಡಿದರೂ ಭಗವಂತನಲ್ಲಿ ಅನನ್ಯ ಅನುರಾಗವಿಲ್ಲದೆ ಜೀವ ಸಾರ್ಥಕ ವಾಗುವುದಿಲ್ಲವೆಂಬ ಮಾತು ನನ್ನ ಮನಸ್ಸಿ ನಲ್ಲನುರಣಿಸುತ್ತಿತ್ತು. ಭವಜಲಧಿಯಲ್ಲಿ ತೇಲಿ ಮುಳುಗುವ ಜೀವಿಗಳಿಗೆ ವಿಷ್ಣುಭಕ್ತಿ ಯೊಂದು ತೆಪ್ಪವಿದ್ದಂತೆ; ದೋಣಿ ಇದ್ದಂತೆ- ಎಂಬ ಮಾತು ನನಗೆ ಮನದಟ್ಟಾಯಿತ್ತು.

ಚಕ್ಷುರುನ್ಮೀಲಿತಂ ಯೇನ ತಸ್ಮೈ ಶ್ರೀ ಗುರವೇ ನಮಃ-ಎಂದು ನಾರದರಿಗೆ ನಾನು ನಮಸ್ಕರಿಸಿದೆ – ಮನಶ್ಶಾಂತಿಯ ಮಾರ್ಗ ವನ್ನು ಸೂಚಿಸಿದ್ದಕ್ಕಾಗಿ ಅವರನ್ನು ಬಹು ವಾಗಿ ಕೊಂಡಾಡಿದೆ. ನಾರದರು ಹೊರಟು ಹೋದರು. ಅವರು ನನ್ನ ಮನಸ್ಸಿನಲ್ಲಿ ಒಂದು ಲೋಕಶ್ರೇಯಸ್ಕರವಾದ ವಿಚಾರ ವನ್ನಿಟ್ಟು ಹೋದರು.

ನಾನಾ ವಿಚಾರವನ್ನೇ ಕುರಿತು ಬಹು ವಾಗಿ ಚಿಂತಿಸಿದೆ. ಈ ಚಿನ್ತನೆಯ ಫಲವೇ ನಾನು ರಚಿಸಿದ ಭಾಗವತ ಪುರಾಣ. ಅದನ್ನು ಪರಮಹಂಸ ಸಂಹಿತೆಯೆಂದೂ ಕರೆಯು ತ್ತಾರೆ. ಈ ಪುಣ್ಯಪ್ರದವಾದ ಗ್ರಂಥಕ್ಕೆ ಭಕ್ತಿಯೇ ಶಕ್ತಿ; ನಾರದನೇ ಋಷಿ; ಶ್ರೀ ಕೃಷ್ಣಪರಮಾತ್ಮನೇ ದೇವತೆ, ಜ್ಞಾನ ವೈರಾಗ್ಯಗಳೇ ಕೀಲಕ. ದೈವೀಶಕ್ತಿ ನನ್ನಿಂದ ಬರೆಸಿದೆ. ನಾನು ಕೇವಲ ಒಂದು ನಿಮಿತ್ತ. ಹೀಗಾಗಿ ಭಾರತೀಯಸಾಹಿತ್ಯದಲ್ಲಿ ಕೃಷ್ಣ ಭಕ್ತಿ ಶಾಖೆಯ ಅಗ್ರಮಾನ್ಯವಾದ ಗ್ರಂಥ ವೆಂದು ಭಾಗವತಕ್ಕೆ ಪರಮಪೂಜ್ಯ ಸ್ಥಾನ ಮಾನಗಳು ಲಬ್ಧವಾಗಿವೆ. ನಾನು ರಚಿಸಿದ ಈ ಪರಮಹಂಸ ಸಂಹಿತೆಯ ತಾತ್ಪರ್ಯ ವನ್ನು ಒಂದೇ ಮಾತಿನಲ್ಲಿ ಹೇಳಬೇಕಾದರೆ ಹೀಗೆ ಹೇಳಬಹುದು –

ವಾಸುದೇವಪರಾ ವೇದಾಃ
ವಾಸುದೇವಪರಾ ಮಖಾಃ
ವಾಸುದೇವಪರಂ ಜ್ಞಾನಂ
ವಾಸುದೇವಃಪರಾ ಗತಿಃ ॥

---

(11 ನೇ ಪುಟದಿಂದ)

ರಮಣೀಯವಾದ ಈ ಚಂದ್ರಹಾಸನ ಕಥೆ ಯನ್ನು ಹೇಳುವಾಗ ಕವಿ ಬಳಸಿರುವ ಮಧುರತರ ವಾದ ಭಾಷೆ ಹೃದ್ಯವಾಗಿದ್ದು ಚಂದ್ರಹಾಸನ ಹರಿ ಭಕ್ತಿಯನ್ನು ನಿರೂಪಿಸುವಲ್ಲಿ ಸಮರ್ಥವಾಗಿ ಕೆಲಸ ಮಾಡಿದೆ. ಮೊದಲೇ ಹೇಳಿದಂತೆ, ವಿಷ್ಣುಭಕ್ತಿ ಯನ್ನು ಚಿಮ್ಮಿಸುವುದೇ ಪ್ರಧಾನಗುರಿಯಾದ ಈ ಕಥೆಯಲ್ಲಿ, ಕವಿ ಸಂದರ್ಭ ಸಿಕ್ಕಿದೆಡೆಯೆಲ್ಲ ತನ್ನ ಕೆಲಸವನ್ನು ಚೆನ್ನಾಗಿ ಮಾಡಿದ್ದಾನೆ. ಒಟ್ಟಿನಲ್ಲಿ ನಿರಪರಾಧಿಯಾದ ಹರಿಭಕ್ತನೊಬ್ಬ, ತನಗೆದು ರಾದ ದುಷ್ಟಶಕ್ತಿಯೊಂದರ ಕಾಟಗಳಿಂದ ಹೇಗೆ ಪಾರಾದ ಎಂಬುದನ್ನು ಚಂದ್ರಹಾಸನ ಕಥೆ ಸೊಗಸಾಗಿ ಚಿತ್ರಿಸುವುದಲ್ಲದೆ, ಓದುಗರ ಮನ ದಲ್ಲೂ ಹರಿ ಮಹಿಮೆಯ ಪ್ರಭಾವವನ್ನು ಗಾಢ ವಾಗಿ ಮೂಡಿಸುತ್ತದೆ.

## ಗಮನಿಕೆ

ವಿವಿಧಭಾಷೆಗಳಲ್ಲಿ ಸಪ್ತಗಿರಿಯ ಪ್ರಚಾರ, ಆಸ್ತಿಕರ ಅಭಿಮಾನಗಳು ದಿನ ದಿನ ಪ್ರವರ್ಧಮಾನವಾಗುತ್ತಿರುವುದರಿಂದ ಕೆಲವರು ಚಂದಾದಾರರಿಗೆ ಸಪ್ತಗಿರಿ ಪ್ರತಿ ಗಳು ಲಭಿಸದೆ ಹೋಗುತ್ತಿವೆ. ಆದ್ದರಿಂದ ಸಪ್ತಗಿರಿಯನ್ನು ಕೋರುವವರು ಕೆಳಗಿನ ಸೂಚನೆಗಳನ್ನು ಗಮನಿಸಲು ಕೋರು ತ್ತೇವೆ.

* ಸಪ್ತಗಿರಿಯನ್ನು ಕೋರುವವರು ಪ್ರತಿ ತಿಂಗಳಿನಲ್ಲಿ 15 ನೇ ತಾರೀಖಿನ ಒಳಗೆ ಚಂದಾ ಹಣವನ್ನು ಕಳುಹಿಸಬೇಕು. ನಂತರ ಕಳುಹಿಸಿದವರಿಗೆ ಮಾರನೆಯ ತಿಂಗಳಿನಿಂದ ಮಾತ್ರವೇ ಪತ್ರಿಕೆ ಲಭ್ಯವಾ ಗುತ್ತದೆ.

* ಹೊಸ ಚಂದಾದಾರರು ಮನಿ ಆರ್ಡರ್ ಕೂಪನಿನಲ್ಲಿ 'ಹೊಸಚಂದಾ' ಎಂದು ಬರೆಯಬೇಕು. ಮಿಕ್ಕ ಚಂದಾದಾರರು ಕೂಪನಿನಲ್ಲಿ ತಮ್ಮ ಚಂದಾಸಂಖ್ಯೆಯನ್ನು ನಮೂದಿಸಬೇಕು. ಹಿಂದಿನ ಸಂಚಿಕೆಯ ತಮ್ಮ ವಿಳಾಸದ ಕಾಗದವನ್ನು ಕಳುಹಿ ಸಿದರೂ ಬಹಳ ಸೌಕರ್ಯವಾಗುತ್ತದೆ.

* ಸಪ್ತಗಿರಿ ಪ್ರತಿಗಳಿಗೆ ಸಂಬಂಧಿಸಿದ ಹಣವನ್ನಾಗಲಿ, ಇತರ ವಿವರಗಳಿಗಾಗಲಿ ಕೆಳಗಿನ ವಿಳಾಸಕ್ಕೆ ಮಾತ್ರವೇ ಬರೆಯ ಬೇಕು.

**ಸಂಪಾದಕರು**
ಸಪ್ತಗಿರಿ
ಟಿ. ಟಿ. ಡಿ.
ತಿರುಪತಿ–517501

ಯುವವಾಣಿ

# ಭೋಗದ ನಶ್ವರತೆ

ಗೋಮತಿ ನದಿಯ ತೀರದ ಪವಿತ್ರ ಪರಿಸರ, ಪಕ್ಕದಲ್ಲಿ ಮುನಿಯೊರ್ವರ ಆಶ್ರಮ, ಭಗವಂತನನ್ನು ಒಲಿಸಿಕೊಳ್ಳಲು ಮುನಿಯ ಘೋರವಾದ ತಪಸ್ಸು. ಅವರೇ 'ಕಂಡು' ಮಹರ್ಷಿ. ಒಂಟಿ ಕಾಲಿನ ಮೇಲೆ ನಿಂತು ತಪೋನಿರತನಾದ ಮುನಿಯ ತಪಸ್ಸಿನ ಪ್ರಖರತೆಯ ಶಾಖ ದೇವ ಲೋಕದ ಒಡೆಯ ದೇವೇಂದ್ರನಿಗೆ ತಾಕಿತು. ತನ್ನ ಸ್ಥಾನಕ್ಕೆ ಚ್ಯುತಿ ಬರಬಹುದೆಂದು ಭಯಗೊಂಡ ದೇವೇಂದ್ರ, ಮುನಿಯ ತಪಸ್ಸನ್ನು ಭಂಗಗೊಳಿಸಲು ಬಯಸಿದ.

ದೇವಲೋಕದ ಅಪ್ಸರೆ ಪ್ರಮ್ಲೋಚೆಯನ್ನು ಇದಕ್ಕಾಗಿ ದೇವೇಂದ್ರ ಅರಿಸಿದ. ಸುಂದರವಾದ ರೂಪ, ಆಕರ್ಷಕವಾದ ಮೈಮಾಟ, ಅಪೂರ್ವ ಕಾಂತಿಯಿಂದೊಡಗೂಡಿದ ಸುರಲೋಕದ ಸೌಂದರ್ಯ ಧರೆಗಿಳಿಯಿತು. ಕೆಲವೇ ಸಮಯದಲ್ಲಿ 'ಕಂಡು' ಮಹರ್ಷಿಯ ಮನವನ್ನ ಪಹರಿಸುವಲ್ಲಿ ಇವಳು ಸಫಲಳಾದಳು. ಅವಳ ಸ್ನೇಹವನ್ನು ಬಯಸಿದ ಮಹರ್ಷಿ, ಅವಳ ಬಾಹುಗಳಲ್ಲಿ ಬಂಧಿಸಲ್ಪಟ್ಟ. ಬಹುದಿನಗಳು ಕಳೆದು ಹೋದವು, ದೇವೇಂದ್ರನ ಆದೇಶಗಳನ್ನು ಪಾಲಿಸಿದ ತೃಪ್ತಿಯು ಪ್ರಮ್ಲೋಚೆಗೆ ದೊರೆಯಿತೇ ವಿನಃ, ಭೋಗದ ತೃಪ್ತಿಯು ಮುನಿಗೆ ದೊರೆಯಲಿಲ್ಲ. ಪುನಃ ತನ್ನ ಲೋಕಕ್ಕೆ ತೆರಳಲು ಅನುಮತಿಯನ್ನು ಕೇಳಿದ ಸುರ ಸುಂದರಿಯನ್ನು ತೊರೆಯಲು ಮುನಿಗೆ ಮನಸ್ಸಿಲ್ಲ. ವಿರಹವೇದನೆಗೆ ಹೆದರಿದ ಮುನಿ ಏನಾದರೂ ನೆಪ ಒಡ್ಡಿ ಅವಳನ್ನು ತಡೆಯುತ್ತಲೇ ಹೋದ, ಮುನಿಯ ಶಾಪದ ಭಯದಿಂದ ಇವಳು ಸಹಕರಿಸುತ್ತಲೇ ನಡೆದಳು.

ಅದೊಂದು ದಿನ ಸಾಯಂಕಾಲದ ಸಮಯ. ಸೂರ್ಯನು ತನ್ನ ಪ್ರಖರತೆಯನ್ನು ಕಡಿಮೆ ಮಾಡಿ, ಕಡಲಿನಲ್ಲಿಳಿಯುತ್ತಿದ್ದಾನೆ. ಪಕ್ಷಿಗಳು ತಮ್ಮ ತಮ್ಮ ಗೂಡುಗಳಿಗೆ ಮರಳುತ್ತಿವೆ. ಪ್ರಮ್ಲೋಚೆಯ ಒಡನಾಟದಲ್ಲಿದ್ದ ಮುನಿ ಇದನ್ನು ಕಂಡು ಕಾತರದಿಂದೆದ್ದು, ಕಮಂಡಲಾದಿಗಳನ್ನು ತೆಗೆದುಕೊಂಡು ಗೋಮತಿ ನದಿಯ ತೀರದೆಡೆಗೆ ಹೋಗಲು ಸಿದ್ಧನಾದ. ಇದನ್ನು ಕಂಡು ಅಪ್ಸರೆ ನುಡಿದಳು "ಏಕಿಷ್ಟು ಅವಸರ ಮುನಿವರ್ಯಾ". "ದೇವಿ, ಸಾಯಂಕಾಲವಾಗುತ್ತಿದೆಯಲ್ಲವೆ? ಸಾಯಂಕಾಲದ ಸಂಧ್ಯಾವಂದನೆಗೆ ತೆರಳುತ್ತಿರುವೆ. ಸಂಧ್ಯಾ ಸಮಯ ಮೀರಿದರೆ ಕರ್ತವ್ಯ ಲೋಪವಾಗುವುದು'' ಎಂದ. ಇದನ್ನು ಕೇಳಿದ ಪ್ರಮ್ಲೋಚೆ ನಕ್ಕು "ಇಷ್ಟು ದಿನಗಳಿಂದಿಲ್ಲದ ಕರ್ತವ್ಯಲೋಪದ ಭಯ ಇಂದೇಕೆ'' ಎಂದು ನುಡಿದಳು.

"ಇಂದು ಬೆಳಗಿನ ಕರ್ಮಗಳನ್ನು ಮುಗಿಸಿಕೊಂಡು ಕುಟೀರಕ್ಕೆ ಮರಳುವಾಗ ನೀನು ನನಗೆ ದೊರೆತೆ, ಸದ್ಯ ಸಾಯಂಕಾಲವಾಗಿದೆ. ಸಂಧ್ಯಾವಂದನೆಗೆ ತೆರಳುತ್ತಿರುವೆ ಇದರಲ್ಲಿ ಅಚ್ಚರಿಯೇ'' ಎಂದು ಮುನಿ ನುಡಿದ. ಪ್ರಮ್ಲೋಚೆ ನುಡಿದಳು "ಮುನಿವರ್ಯಾ, ನಾನು ಬೆಳಗಿನ ಜಾವದಲ್ಲಿ ಬಂದಿದ್ದು ನಿಜ, ಆದರೆ ನಾನು ಬಂದಂದಿನಿಂದ ಸಹಸ್ರಾರು ಹಗಲು ಮತ್ತು ರಾತ್ರಿಗಳು ಕಳೆದಿವೆ. ಆದರೆ ನಾನು ಇಲ್ಲಿಗೆ ಬಂದು ಕೇವಲ ಒಂದು ದಿನವಾಯಿತೆಂದು ಭಾವಿಸಿರುವಿರಲ್ಲಾ".

ಇದನ್ನು ಕೇಳಿದ ಮುನಿ ಬೆಚ್ಚಿಬಿದ್ದ. ತನ್ನ ಅಪರಾಧದ ಅರಿವಾಯಿತು. ಜೀವನ ವ್ಯರ್ಥವಾಯಿತೆಂದು ಹಲುಬಿದ. ಭೋಗದ ಜೀವನದ ಬಗ್ಗೆ ಜಿಗುಪ್ಸೆಗೊಂಡ.

ಜೀವನದಲ್ಲಿ ಸ್ತ್ರೀಯರ ಮೋಹದ ಪಾಶದಲ್ಲಿ ಸಿಲುಕಿ ಬವಣೆಪಟ್ಟ ದಶರಥ ಮಹಾರಾಜ, ಪಾಂಡುರಾಜ, ಮತ್ತು ವಿಶ್ವಾಮಿತ್ರರಂತಹ ವ್ಯಕ್ತಿಗಳ ನೆನಪಾಯಿತು. ಸ್ತ್ರೀಯಳ ಮೋಹದ ಪಾಶದಲ್ಲಿ ಸಿಲುಕಿ ನಾನೂ ಹಾಳಾದೆನೆಂದು, ಪರಿಪರಿಯಾಗಿ ದುಃಖಿಸಿದ, ಭಯದಿಂದ ತತ್ತರಿಸಿ ಹೋದ. ಪ್ರಮ್ಲೋಚೆಗೆ ಸ್ವರ್ಗಕ್ಕೆ ತೆರಳಲು ಅನುಮತಿಯನ್ನು ಕೊಟ್ಟ. ಇವಳನ್ನು ಶಪಿಸುವುದರಲ್ಲಿ ಯಾವ ಪ್ರಯೋಜನವಿಲ್ಲವೆಂದು ತನ್ನನ್ನು ತಾನೇ ಹಳಿದುಕೊಂಡ. ಸಾಧನೆಯ ಎಚ್ಚರವಾಡಿಕೊಂಡ. ಮುನಿಯು ಜೀವನದ ಉಳಿದ ಸಮಯವನ್ನು ಸಾರ್ಥಕ ಮಾಡಿಕೊಳ್ಳಬಯಸಿ ಪುನಃ ತಪಸ್ಸಿಗೆ ನಿಂತುಕೊಂಡ.

ಇಂತಹದೇ ಮತ್ತೊಂದು ಪ್ರಸಂಗ ಭಾಗವತದಲ್ಲಿ ಕಂಡುಬರುತ್ತದೆ. ಈ ರೋಚಕ ಪ್ರಸಂಗ, ಸಾಧಕರಿಗೆ ಎಚ್ಚರಿಕೆಯ ಕಿವಿಮಾತು.

ನಹುಷ ಚಕ್ರವರ್ತಿಯ ಮಗ ಯಯಾತಿ ಮಹಾರಾಜ. ಅದೊಂದು ಸಲ ಶುಕ್ರಾಚಾರ್ಯರಿಂದ ಮಹಾರಾಜನಿಗೆ ಶಾಪ, ಶಾಪದ ಫಲವಾಗಿ, ಯಯಾತಿಗೆ ವಾರ್ಧಕ್ಯವು ಬಂದಿತು. ಇದರಿಂದ ಮುದುಕನಾಗಿ ಹೋದ ಯಯಾತಿಯು ಶುಕ್ರಾಚಾರ್ಯರನ್ನು ಮೊರೆಹೊಕ್ಕ. "ನನಗಿನ್ನೂ ಜೀವನದಲ್ಲಿ ಯೌವನ ಸುಖವನ್ನನುಭವಿಸಿದ ತೃಪ್ತಿಯು ದೊರೆತಿಲ್ಲ. ನನಗೆ ಪುನಃ ಯೌವನ ಬರಬೇಕು'' ಎಂದು ಪ್ರಾರ್ಥಿಸಿದ. ಆಗ ಶುಕ್ರಾಚಾರ್ಯರು "ನಿನಗೆ ಯಾರಾದರೂ ತಮ್ಮ ಯೌವನವನ್ನು ಕೊಟ್ಟು ನಿನ್ನ ವಾರ್ಧಕ್ಯವನ್ನು ಅವರು ಪಡೆದುದಾದರೆ ಯೌವನವನ್ನು ನೀನು ಪುನಃ ಅನುಭವಿಸಬಹುದು'' ಎಂದು ನುಡಿದರು.

ಯಯಾತಿ ಮಹಾರಾಜನು, ಯದು, ತುರ್ವಸು, ದ್ರುಹ್ಯ ಮತ್ತು ಅನು ಎಂಬ ತನ್ನ ಮಕ್ಕಳಲ್ಲಿ ವಿಷಯವನ್ನು ಅರುಹಿದ. ಅವರಾರೂ ಅದಕ್ಕೆ ಒಪ್ಪಲಿಲ್ಲ. ಆದರೆ ಕೊನೆಯ ಮಗನಾದ ಪುರುವು ಮಾತ್ರ ತನ್ನ

ಶ್ರೀ ಹ.ರಾ. ಮಣ್ಣೂರ್

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ,

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ.

### ಆಲಯ ಕಾರ್ಯಕ್ರಮ.

| | ಶುಕ್ರವಾರಗಳಲ್ಲಿ | ಇತರ ದಿನಗಳಲ್ಲಿ |
|---|---|---|
| ಸುಪ್ರಭಾತ | ಬೆಳಗ್ಗೆ 4–00 ರಿಂದ 4–30 | ಬೆಳಗ್ಗೆ 5–00 ರಿಂದ 5–30 |
| ಸಹಸ್ರನಾಮಾರ್ಚನೆ | ,, 4–30 ರಿಂದ 5–00 | ,, 5–30 ರಿಂದ 6–00 |
| (ರೂ 6–00 ಶುಲ್ಕದಿಂದ 4 ಮಂದಿಗೆ ಅನುಮತಿ) | | |
| ಶುದ್ಧಿ, 1ನೇ ಗಂಟೆ | ಬೆಳಗ್ಗೆ 5–15 ರಿಂದ 5–45 | ಬೆಳಗ್ಗೆ 6–00 ರಿಂದ 6–30 |
| ಸರ್ವದರ್ಶನ | ,, 5–45 ರಿಂದ 7–00 | ,, 6–30 ರಿಂದ 11–30 |
| ಸಳ್ಳಿಂಪು | ,, 7–00 ರಿಂದ 7–30 | |
| ಅಭಿಷೇಕ | ,, 9–00 ರಿಂದ 10–00 | |
| ( ರೂ 100/- ಶುಲ್ಕದಿಂದ ಒಬ್ಬರಿಗೆ ಅನುಮತಿ ) | | |
| (ಅಭಿಷೇಕಾನತಂತರ ದರ್ಶನ ಒಬ್ಬರಿಗೆ ರೂ 2/–ಶುಲ್ಕ) | | |
| ಅಲಂಕಾರ 2ನೇ ಗಂಟೆ | 10–00 ರಿಂದ 11–00 | ಮಧ್ಯಾಹ್ನ 11–30 ರಿಂದ 12–00 |
| ಸರ್ವದರ್ಶನ | 11–00 ರಿಂದ ರಾತ್ರಿ 8–00 | 12–30 ರಿಂದ 6–00 |
| ಊಂಜಲ್ ಸೇವೆ | ರಾತ್ರಿ 7–00 ರಿಂದ 8–00 | — |
| (ಮುಕುರ ಮಂಟಪದಲ್ಲಿ) | (ಶುಲ್ಕ ರೂ 150/-) | |
| ರಾತ್ರಿ ಗಂಟೆ | ರಾತ್ರಿ 8–00 ರಿಂದ 8–30 | ರಾತ್ರಿ 6–00 ರಿಂದ 6–30 |
| ಸರ್ವದರ್ಶನ | — | ,, 6–30 ರಿಂದ 9–15 |
| ಏಕಾಂತಸೇವೆ | ,, 8–30 ರಿಂದ 9–00 | ,, 9–15 ರಿಂದ 9–30 |

**ಪೇಷ್ಕಾರ್.**

ಯೌವನವನ್ನು ತಂದೆಗೆ ಬಿಟ್ಟುಕೊಟ
ಅವನ ಮುದಿತನವನ್ನು ತಾನು ತೆಗೆ
ಕೊಂಡ.

ಪುರುವಿನಿಂದ ಯೌವನವನ್ನು ಪ
ಯಯಾತಿಯು ಜೀವನದಲ್ಲಿ ವಿಷಯ-ಭೋ
ಗಳನ್ನು ಸತತವಾಗಿ ಅನುಭವಿಸಿದ. ಭೋ
ಸಕ್ತನಾದ ಯಾಯಾತಿಯು ದಿನಗಳ
ಳಿದ್ದನ್ನು ತಿಳಿಯಲು ಅಸಮರ್ಥನಾ
ಅನುಭವಿಸಿದಷ್ಟೂ ಅನುಭವಿಸುವ ಚಪ
ತೃಪ್ತಿಯೇ ಇಲ್ಲ. ಸಹಸ್ರಾರು ವರ್ಷ
ಕಾಲದ ಭೋಗಾದಿಗಳು ತನಗೆ ತೃ
ಯನ್ನು ತರದಿದ್ದಾಗ, ಜೀವನದ
ವೈರಾಗ್ಯವು ಉಂಟಾಯಿತು. ತನ್ನ ರಾ
ಯಾದ ದೇವಯಾನಿಯನ್ನು ಕರೆದು, "ದೇ
ನಾ ನಿನ್ನ ಪ್ರೇಮವಶನಾಗಿ ಅನೇಕ ವ
ಗಳನ್ನು ಕಳೆದೆ, ಆದರೂ ನನಗೆ ಜೀವನದ
ತೃಪ್ತಿಯು ದೊರೆಯಲಿಲ್ಲ. ಜೀವನದ
ಭೋಗಾದಿಗಳು ಎಂದಿಗೂ ತೃಪ್ತಿಯನ
ತರಲಾರವು. ಜೀವನದ ಉಳಿದ ಸಮ
ದಲ್ಲಿಯಾದರೂ ಸಾಧನೆಗಾಗಿ ಯತ್ನಿಸು
ಎಂದು ನುಡಿದ. ತನ್ನ ಯೌವನವನ
ಪುನಃ ಪುರುವಿಗೆ ಹಿಂದಿರುಗಿಸಿದ. ತ
ರಾಜ್ಯವನ್ನು ಎಲ್ಲ ಮಕ್ಕಳಿಗೂ ಹ
ಕೊಟ್ಟು, ಕಾಡಿಗೆ ತೆರಳಿ, ತಪಸ್ಸನ್ನಾಚರಿ
ಸದ್ಗತಿಯನ್ನು ಹೊಂದಿದ.

ಮಹರ್ಷಿ ಮತ್ತು ಮಹಾರಾಜ
ಭೋಗದ ಜೀವನದಲ್ಲಿ ಮೈಮರೆತ
ಸಹಸ್ರಾರು ವರ್ಷಗಳ ಕಾಲ ಭೋಗಗಳನ
ಅನುಭವಿಸಿದರು. ಆದರೆ ಇದರಿಂದ ಎಂದಿಗ
ತೃಪ್ತಿಯು ಜೀವನದಲ್ಲಿ ದೊರೆಯಲಾರ
ಎಂಬುದನ್ನು ಅರಿತರು. ಜೀವನದ ಉಳ
ಸಮಯದಲ್ಲಿ ಭಗವಂತನ ಅನುಗ್ರಹಕ್ಕಾ
ತಪವನ್ನು ಗೈದರು.

ಜೀವನದಲ್ಲಿ ಭೋಗದ ಆವಶ್ಯಕತೆ
ಬಗ್ಗೆ, ಮೇಲ್ಕಂಡ ಭೋಗಿಗಳ ಅನುಭವ
ಮಾತುಗಳು ಸಾಕಲ್ಲವೆ?

(೬ ನೇ ಪುಟದಿಂದ)

ತಮಿಳುನಾಡಿನ ಸಂತರೆಂದು ಪ್ರಸಿದ್ಧರಾದ ಆಳ್ವಾರರು ತಮಿಳುವೇದವೆಂದು ಹೆಸರಾಂತ ದಿವ್ಯ ಪ್ರಬಂಧಗಳಲ್ಲಿ ಶರಣಾಗತಿಯ ಅಗತ್ಯ ಮತ್ತು ಮಹಿಮೆಯನ್ನು ವರ್ಣಿಸಿದ್ದಾರೆ. ಪರಮಾತ್ಮನನ್ನು ಪಡೆಯುವುದಕ್ಕೆ ಪ್ರಪತ್ತಿ ಅತಿ ಮುಖ್ಯವೆಂದು ಹಾಡಿದ್ದಾರೆ. ಇವರಲ್ಲಿ ಕಿರೀಟಪ್ರಾಯರಾದ ನಮ್ಮಾಳ್ವಾರವರು ಹೀಗೆ ಹೇಳಿದ್ದಾರೆ. "ಹೇ! ಮನಸ್ಸೇ! ಅಪ್ರಮೇಯ ಮಹಿಮೆಯುಳ್ಳ ನಿರತಿಶಯಾನಂದ ಮೂರ್ತಿಯಾಗಿ, ಅಜ್ಞಾನವನ್ನು ತೊಲಗಿಸಿ, ದಿವ್ಯ ತೇಜೋಪ್ರಭಾವದಿಂದ ಚೇತನನಿಗೆ ಜ್ಞಾನಶಕ್ತಿಯನ್ನು ಅನುಗ್ರಹಿಸುವವನಾಗಿ, ದಿವ್ಯಜ್ಞಾನಿಗಳಾದ ನಿತ್ಯಸೂರಿಗಳಿಗೆ ನಾಯಕನಾಗಿ ಇರುವ ಪರಮಾತ್ಮ, ಪರಂಜ್ಯೋತಿ ಪರಮಾತ್ಮ ಎಂದು ಹೆಸರಾಂತ ಶ್ರಿಯಃಪತಿಯ ಪಾದಕಮಲಗಳಲ್ಲಿ ಶರಣಾಗತನಾಗಿ ಭಜಿಸು".

ಪ್ರಪತ್ತಿ ವಿದ್ಯೆಯು ಎಲ್ಲ ಸಾಧಕರಿಗೂ ಅಗತ್ಯ. ಪರಮಾತ್ಮನಲ್ಲಿ ಪ್ರಪತ್ತಿ ಮಾಡಬೇಕೆಂದು ಎಲ್ಲ ಮತಗಳೂ ತಿಳಿಸುತ್ತವೆ. ಶಂಕರ ಭಗವತ್ಪಾದರು ಶರಣಾಗತಿ ಮಹಿಮೆಯನ್ನು ಹೀಗೆ ಕೇಳಿಸುತ್ತಾರೆ. "ನಾರಾಯಣ ಕರುಣಾಮಯ ಶರಣಂ ಕರವಾಣಿ ತಾವಕಚರಣೌ"ಎಂದು ದ್ವಯಮಂತ್ರದ ಅರ್ಥವನ್ನು ವಿವರಿಸಿದ್ದಾರೆ. ಶ್ರೀ ಮಧ್ವಾಚಾರ್ಯರು 'ಶರಣಾಗತಿರೇವ ಸ್ಯಾತ್ ವಿಷ್ಣೋ ಮೋಕ್ಷ ಫಲಪ್ರದಾ' ಎಂದರು. "ಸರ್ವೇಷಾಂತು ಶಾಸ್ತ್ರಾಣಾಂ ಪರಮಂ ರಹಸ್ಯಂ ಈಶ್ವರ ಶರಣತಾ" ಎಂದರು ಮಧುಸೂದನ ಸರಸ್ವತಿಯವರು. ಹಾಗೆಯೇ ಬೌದ್ಧರು, "ಬುದ್ಧಂ ಶರಣಂ ಗಚ್ಛಾಮಿ"ಎಂದರು. ಇತರ ಧರ್ಮಗಳೂ ಕೂಡ ಶರಣಾಗತಿಗೆ ವಿಶೇಷ ರೀತಿಯ ಮನ್ನಣೆ ಕೊಟ್ಟಿವೆ. ಮೋಕ್ಷಕ್ಕಾಗಿ ಶರಣಾಗತಿ ಮಾಡಿದವರಿಗೆ ಅವರ ಜೀವಿತಕಾಲದಲ್ಲಿ ಪರಮಾತ್ಮ ಧ್ಯಾನ, ಭಜನೆ, ಪೂಜನಾದಿಗಳು ದೊರೆಯುವುದಲ್ಲದೆ ದೇಹತ್ಯಾಗಾನಂತರ ಮೋಕ್ಷ ದೊರೆಯುವುದು ಎಂದು ನಿಗಮಾಂತ ಮಹಾದೇಶಿಕರು ನಿರೂಪಿಸಿದ್ದಾರೆ.

ಪ್ರಪತ್ತಿಯೋಗಕ್ಕೆ ನಿರತಿಶಯಾನಂದದಾಯಕವಾದ, ಪರಿಪೂರ್ಣ ಬ್ರಹ್ಮಾನುಭವದ ಫಲ ಕೊಡುವ ಶಕ್ತಿ ಇದೆ ಎಂಬುದಕ್ಕೆ ಪರಮಾತ್ಮನ ಚರಣಕಮಲಗಳ ಪ್ರಭಾವವೇ ಕಾರಣ, ಇದಕ್ಕೆ ಅನೇಕ ನಿದರ್ಶನಗಳಿವೆ.

ಶ್ರೀರಾಮನ ಪಾದ ಸ್ಪರ್ಶದಿಂದ ಶಿಲೆಯಾಗಿದ್ದ ಅಹಲ್ಯೆಯು ಶಾಪ ವಿಮೋಚನೆ ಪಡೆದಳು. ಪರೀಕ್ಷಿದ್ರಾಜನಿಗೆ ಪ್ರಾಣವಿತ್ತ ಪರಮಾತ್ಮನ ಚರಣಕಮಲಗಳ ಮಹಿಮೆ ಅದ್ಭುತವಾದುದು. ಇದಕ್ಕಿಂತಲೂ ಆಶ್ಚರ್ಯಕರವಾದುದು – ಪ್ರಹ್ಲಾದ ಆಂಜನೇಯರಿಗೆ ಶತ್ರುಗಳ ಮೂಲಕ ಅಗ್ನಿಯಿಂದ ಸುಡಲ್ಪಡುವ ಸನ್ನಿವೇಶವಿದ್ದರೂ ಅಗ್ನಿಯು ಸ್ವಭಾವಕ್ಕೆ ವಿರುದ್ಧವಾಗಿ ಸುಡದಂತೆ ಮಾಡಿದುದು. ಮಹಾಪರಾಧವಮಾಡಿದ ಕಾಕಾಸುರನ ನಾಶಕ್ಕಾಗಿ ಬಂದರೆ ಹುಲ್ಲುಕಡ್ಡಿ ಬ್ರಹ್ಮಾಸ್ತ್ರವಾಗಿ ಅಸುರನನ್ನು ಕ್ಷಮಿಸಿ ಅವನ ಬಲಗಣ್ಣನ್ನು ಅಸ್ತ್ರಕ್ಕೆ ಆಹುತಿಯನ್ನಾಗಿ ಮಾಡಿದುದು. ಹೀಗೆ ಪರಮಾತ್ಮನು ಶತ್ರು ದಮನಕ್ಕಾಗಿ ಅವತಾರಮಾಡಿದರೂ ಅವರ ದಮನವೇ ಅವರಿಗೆ ಹಿತವಾಗಿ ಪರಿಣಮಿಸುವಂತೆ, ಪ್ರಪತ್ತಿ ಧರ್ಮವು ಮಾಡಿದೆ. ಇದಕ್ಕೆ ಆಧಾರಗಳು ಅನೇಕ.

ಇಂದ್ರಂ ಶರಣಂ ಪ್ರಪನ್ನೋಽಭುವಂ ।
ಪ್ರಜಾಪತಿಂಶರಣಂ ಪ್ರಪನ್ನೋಽಭುವಂ ।
ಮೃತ್ಯುಂ ಶರಣಂ ಪ್ರಪನ್ನೋಽಭುವಂ ॥
(ಛಾಂದೋಗ್ಯ)

* * * *

ಪ್ರಣವೋಧನುಃ ಶರೋಹ್ಯಾತ್ಮಾ
ಬ್ರಹ್ಮತಲ್ಲಕ್ಷ್ಯಮುಚ್ಯತೇ
ಅಪ್ರಮತ್ತೇನ ವೇತ್ತವ್ಯಂ
ಶರವತ್ತನ್ಮಯೋ ಭವೇತ್
(ಮುಂಡಕ)

* * * *

ತಸ್ಮಾನ್ನ್ಯಾಸಮೇಷಾಂ ತಪಸಾ ।
ಮತಿರಿಕ್ತಮಾಹುಃ ವಸುರಣ್ಯೋ ವಿಭೂರಸಿ ।

* * * *

ಬ್ರಹ್ಮಣೇತ್ವಾ ಮಹಸ ಓಮಿತ್ಯಾ ।
ತ್ಮಾನಂ ಯುಂಜೀತ
(ಮಹಾನಾರಾಯಣ).

* * * *

ಮಾಮೇವ ಯೇ ಪ್ರಪದ್ಯಂತೇ
ಮಾಯಾಮೇತಾಂ ತರಂತಿ ತೇ ।

* * * *

ನಮಾಂ ದುಷ್ಕೃತಿನೋ ಮೂಢಾಃ
ಪ್ರಪದ್ಯಂತೇ ನರಾಧಮಾಃ

* * * *

ತ್ವಮೇವ ಶರಣಂ ಗಚ್ಛ
ಸರ್ವಭಾವೇನ ಭಾರತ ॥

* * * *

ಸರ್ವಧರ್ಮಾನ್ ಪರಿತ್ಯಜ್ಯ
ಮಾಮೇಕಂ ಶರಣಂ ವ್ರಜ —ಗೀತೆ

* * * *

ಯದ್ಯೇನ ಕಾಮಕಾಮೇನ ನಸಾಧ್ಯಂ
ಸಾಧನಾಂತರೈಃ । ಮುಮುಕ್ಷುಣಾ ಯತ್
ಸಾಂಖ್ಯೇನ ಯೋಗೇನ ನ ಚ ಭಕ್ತಿತಃ
ಪ್ರಾಪ್ಯತೇ ಪರಮಂಧಾಮ ಯತೋ
ನಾವರ್ತತೇಯತಿಃ ತೇನ ತೇನಾಪ್ಯತೇ
ತತ್ರ ನ್ಯಾಸೇನೈವ ಮಹಾಮುನೇ ॥
(ಅಹಿರ್ಬುಧ್ನ್ಯಸಂಹಿತೆ)

* * * *

ತಸ್ಮಿನ್ ಪ್ರಪನ್ನೇಽಪಿ ಹಾಸ್ತ್ಯಲಭ್ಯಂ
ಧರ್ಮಾರ್ಥಕಾಮ್ಯಂ ರಲಮಲ್ಪಕಾಸ್ತೇ
ಸಮಾಶ್ರಿತಾನ್ ಬ್ರಹ್ಮಕರೋ ದನೋತಾ
ನಿಸ್ಸಂಶಯೋ ಮೋಕ್ಷಫಲಪ್ರದಾತಃ ॥

* * * *

ಪ್ರಪನ್ನಾದನ್ಯೇಷಾಂ ನ ದಿಶತಿ ಮುಕುಂದೋ
ನಿಜಪದಂ ಪ್ರಪನ್ನಶ್ಚದ್ವೇಧಾ ಸುಚರಿತ
ಪರಿಪಾಕಾಭಿದಯಾ ವಿಲಂಬೇನಪ್ರಾಪ್ತಿಃ
ಪರಿಮಿತರಸಾ ಜೀವಿತರಸಾ ॥

* * * *

–ಹೀಗೆ ಪ್ರಪತ್ತಿಧರ್ಮವು ವೇದ, ವೇದಾಂಗ ಇತಿಹಾಸ, ಪುರಾಣ, ದಿವ್ಯಪ್ರಬಂಧಾದಿ ಆಧಾರಗಳಿಂದ ದೃಢೀಕರಿಸಲ್ಪಟ್ಟು, ವಿಶ್ವಧರ್ಮವೆಂದು ವ್ಯವಹರಿಸಲು ಅರ್ಹವಾಗಿದೆ. ಪ್ರಪತ್ತಿ ಧರ್ಮಕ್ಕೆ ಸರ್ವಾಧಿಕಾರತ್ವವುಂಟು. "ಸರ್ವಸ್ಯ ಶರಣಂ ಸುಹೃತ್"ಎಂಬಂತೆ ಸಮಸ್ತರಿಗೂ ಪರಮಾತ್ಮನೇ ಗತಿ ಮತ್ತು ಸ್ನೇಹಿತನು ಎಂದು ತಿಳಿಸಲಾಗಿದೆ. ವಾಲ್ಮೀಕಿ ಮಹರ್ಷಿಯು "ಸರ್ವಲೋಕ ಶರಣ್ಯಾಯ ರಾಘವಾಯ ಮಹಾತ್ಮನೇ" ಎಂದು ವಿಭೀಷಣನ ಮೂಲಕ ಹೇಳಿಸಿದ್ದಾನೆ. "ಸರ್ವದೇವ ಪ್ರಪನ್ನಾಯ ತವಾಸ್ಮೀತಿ ಚ ಯಾಚತೇ । ಅಭಯಂ ಸರ್ವಭೂತೇಭ್ಯೋ ದದಾಮ್ಯೇತದ್ವ್ರತಂ ಮಮ"ಎಂಬುದು ಶ್ರೀರಾಮನ ವಾಕ್ಯ.

ಸರ್ವೇಶ್ವರನು ಸಮಸ್ತರಿಗೂ ಸುಹೃತ್ತು ರಕ್ಷಕನೂ ಆಗಿರುವಾಗ, ಕೆಲವರಿಗೆ ಮಾತ್ರ ಎಂದು ಹೇಳುವುದು ಯುಕ್ತವಲ್ಲ. ಆದುದರಿಂದ ಸಮಸ್ತರೂ, ಸರ್ವರಕ್ಷಕನಾದ ಪರಮಾತ್ಮನಲ್ಲಿ ಶರಣಾಗತಿ ಮಾಡಿ ಮೋಕ್ಷ ಪಡೆಯಬಹುದು.

ಒಟ್ಟಿನಲ್ಲಿ ಚೇತನನು ವಿಭೀಷಣನ ಹಾಗೆ ದೀನನಾಗಿಯೇ ಇರಲಿ, ಸಮುದ್ರರಾಜನಂತೆ ಅಹಂಕಾರಯುಕ್ತನಾಗಿಯೇ ಇರಲಿ, ಕಾಕಾಸುರನಂತೆ ಅಪರಾಧಿಯೇ ಆಗಿರಲಿ, ಸುಗ್ರೀವರಾಜನಂತೆ ಉದಾಸೀನನಾಗಿಯೇ ಇರಲಿ, ಯಾವಾಗ ಪ್ರಪತ್ತಿ ಧರ್ಮವನ್ನು ಆಚರಿಸಿದನೋ ಆಗ ಅವನು ರಕ್ಷಿಸಿಯೇ ರಕ್ಷಿಸಲ್ಪಡುವನು, ಇಂತಹ ಕೃಪಾಸಮುದ್ರ ಸ್ವಭಾವವುಳ್ಳವನಾಗಿರುವುದರಿಂದಲೇ, ಗಜೇಂದ್ರಮೋಕ್ಷದಲ್ಲಿ, ಪ್ರಹ್ಲಾದರಕ್ಷಣೆಯಲ್ಲಿ, ದ್ರೌಪದೀಮಾನ ಸಂರಕ್ಷಣೆಯಲ್ಲಿ ಸ್ವಾಮಿಯು ತಾನುಪಟ್ಟ ಶ್ರಮವನ್ನು ಹೇಳಿಕೊಂಡಿದ್ದಾನೆ.

ಹೀಗೆ ಪರಮಾತ್ಮನು ಜೀವಾತ್ಮನಿಗೆ ಶೇಷಿಯಾಗಿ, ಆತ್ಮವಾಗಿ, ಪ್ರೇರಕನಾಗಿ, ಪ್ರಾಪ್ಯಳಾಗಿ ಸರ್ವವಿಧ ಬಂಧುವಾಗಿ ರಕ್ಷಿಸುವ ಭಾರ ವಹಿಸಿದ್ದಾನೆ. ಆದುದರಿಂದ ಪ್ರಪತ್ತಿ ಧರ್ಮವು ಅಮೋಘವಾದ ಮಹಿಮೆಯುಳ್ಳದ್ದಾಗಿ ವಿಶ್ವಧರ್ಮದ ಸ್ವರೂಪವನ್ನು ಹೊಂದಿದೆ. ಸರ್ವರೂ ಇದನ್ನು ಆಚರಿಸಿ ಶಾಶ್ವತ ಸುಖವನ್ನು ಪಡೆಯಬಹುದು.



# ಸಪ್ತಗಿರಿ

## ತಿ.ತಿ.ದೇ. ಗಳ ಸಚಿತ್ರ ಮಾಸಪತ್ರಿಕೆ

ತಿರುಮಲೆ ತಿರುಪತಿ ದೇವಸ್ಥಾನಗಳ ವತಿಯಿಂದ ಹೊರಬರುತ್ತಿರುವ ಸಚಿತ್ರ ಮಾಸಪತ್ರಿಕೆ ಸಪ್ತಗಿರಿ ಧಾರ್ಮಿ ಸಾಂಸ್ಕೃತಿಕ ವಿಷಯಗಳಿಗೆ ಮೀಸಲಾಗಿ ಕನ್ನಡ, ತೆಲುಗು, ತಮಿಳು, ಆಂಗ್ಲ, ಹಿಂದಿ ಭಾಷೆಗಳಲ್ಲಿ ವೈವಿಧ್ಯದೊಡನೆ ಏಕತೆಯನ್ನು ಂಡು ದಿನೇ ದಿನೇ ಜನಪ್ರಿಯವಾಗುತ್ತಿದೆ. ಸಪ್ತಗಿರಿಯ ಕರ್ನಾಟಕ ಪ್ರಾಂತ್ಯದ ಏಜಂಟರ ಪಟ್ಟಿ ಕೆಳಕಂಡಂತಿದೆ.

ಎಸ್. ರಾಮಕೃಷ್ಣಯ್ಯ
ಶ್ರೀ ಮಾರುತಿ ಕಾಫಿ ವರ್ಕ್ಸ್
ಸ್ಟೇಷನ್ ರಸ್ತೆ, ಹೊಸಪೇಟೆ.

ಕೆ. ವಿಜಯಕುಮಾರ್
ಭವಾನಿಶಂಕರ್ ಏಜನ್ಸಿ
ಕೆ.ಎಂ. ಹಳ್ಳಿ, ಕೂಡ್ಲಿಗಿ.

ಸಿ.ಪಿ. ರಾಮಕೃಷ್ಣ
ಜವಳಿ ವ್ಯಾಪಾರಿಗಳು
ಚಾಮರಾಜನಗರ.

ಸಿ. ಸತ್ಯನಾರಾಯಣ
ಬಾಲಾಜಿ ಏಜನ್ಸೀಸ್
18, ಹಳೆಕಚೇರಿ ರಸ್ತೆ, ಬಳ್ಳಾರಿ.

ಎಸ್. ಶ್ರೀಕಂಠಯ್ಯ
ಶ್ರೀನಿಧಿ ಸ್ಟೋರ್ಸ್, ಕರ್ನಾಟಕ ಸಂಘ ರಸ್ತೆ
ಜಾಲಹಳ್ಳಿ, ಬೆಂಗಳೂರು.

ಎಸ್.ವಿ. ಕೃಷ್ಣಮೂರ್ತಿ
447, ಗುರುಕೃಪಾ
ಸುಬ್ಬರಾಯ ಪೇಟೆ, ಚಿಕ್ಕ ಬಳ್ಳಾಪುರ.

ವೆಂಕಟೇಶ ಶಿವಾಜಿ ಝಿಂಗಾಡೆ
ರಾಮಕೃಷ್ಣ ರೆಡಿಮೇಡ್ ಸ್ಟೋರ್ಸ್
ಮುದ್ದೇಬಿಹಾಳ, ಬಿಜಾಪುರ.

ವಿ.ಎಸ್. ಗೋಪಾಲಕೃಷ್ಣ
ಬೃಂದಾವನ ಸ್ಟೋರ್ಸ್
10/125. 9ನೇ ಮೇನ್ 3ನೇ ಬ್ಲಾಕ್
ಜಯನಗರ, ಬೆಂಗಳೂರು.

ಕೆ.ಎಸ್. ವೆಂಕಟಾಚಲಪತಿಶೆಟ್ಟಿ
ರಮೇಶ್ ಸ್ಟೋರ್ಸ್
ಕುಣಿಗಲ್.

ಆರ್.ಜಿ. ಏಜನ್ಸಿ
ಸೋಮವಾರಪೇಟೆ
ರಾಯಚೂರು.

ಡಿ. ಗೋಪಾಲಶೆಟ್ಟಿ
ನ್ಯೂಸ್ಏಜಂಟ್
ಶಿವಾನಂದಸ್ಟೋರ್ಸ್. ಮದ್ದೂರು.

ಬಿ.ಕೆ. ವೆಂಕಟೇಶನ್
ಆಡಿಟರ್, 1759, 9ನೇ ಕ್ರಾಸ್
ತುಮಕೂರು.

ಬಿ.ಎಸಿ. ಭಟ್
ಉದಯವಾಣಿ ಏಜಂಟ್
ಕಾಳೇಶ್ವರ.

ಸುಬ್ಬಾರಾವ್
ನ್ಯೂಸ್ಏಜಂಟ್, ಆಸ್ಪತ್ರೆರಸ್ತೆ
ಮಧುಗಿರಿ.

ವೈ.ಎಸ್. ಮಲ್ಲಿಕಾರ್ಜುನ ಶೆಟ್ಟಿ
ಸ್ಟೇಟ್‌ಬ್ಯಾಂಕ್ ಆಫ್ ಮೈಸೂರ್ ಬಳಿ
ಕೂಡ್ಲಿಗಿ.

ವೆಂಕಟೇಶ್ವರ ಕಾಫಿವರ್ಕ್ಸ್, ಅಂಡ್ ಬುಕ್‌ಡಿಪೋ
ಜಯಲಕ್ಷ್ಮಿ ಬಿಲ್ಡಿಂಗ್ಸ್, 610 ಬಸ್‌ಸ್ಟಾಂಡ್ ರಸ್ತೆ
ಮಂಡ್ಯ.

ಪಿ.ಎಸ್. ನಾಗರತ್ನಮ್ಮ
W/o ಪಿ.ಸತ್ಯನಾರಾಯಣ,ನಟೇಶ್‌ಕಾಂಪೌಂಡ್ಸ್
ಬಂಗಾರಪೇಟೆ.

ಆನಂದರಾವ್. ನಿವೃತ್ತ ಉಪಾಧ್ಯಾಯರು
ಶಿವಪ್ಪ ನಾಯಕನಗರ
ಸಾಗರ.

ಎಸ್. ರತ್ನಮ್ಮ
ಸಲ್ಲಾಪುರ. ತರೀಕೆರೆ.

ಎಂ.ಎಸ್. ಕೃಷ್ಣಮೂರ್ತಿ
ಉತ್ತರಾದಿಮಠ
ಚಿತ್ರದುರ್ಗ

ಶ್ರೀಮತಿ ಬಿ.ಎಚ್. ಕಟ್ಟಿ
ಉಪ್ಪಳ ಬುರುಜು ಹಿಂಭಾಗದರಸ್ತೆ
ಬಿಜಾಪುರ.

ಎಸ್. ಮೂಡಲಗಿರಿರಾಜ
S/o ಶ್ರೀ ರಂಗಶೆಟ್ಟಿ,ಸಪ್ತಗಿರಿ ನಿಲಯ
ಭರಮಸಾಗರ.

ಶ್ರೀಮತಿ ರಾಜಗುರು
c/o ಡಿ.ಎಸ್.ಆರ್. ರಾಜಗುರು
ಸರ್ಕಾರಿ ಜೂನಿಯರ್‌ಕಾಲೇಜು, ಮಾನವಿ

ವಿ.ಎಸ್. ಭಾಗ್ಯರಾಜಶೆಟ್ಟಿ
ಹುಲಿಕಲ್ಲು,ಅರಕಲಗೂಡು(ತಾ)
ಹಾಸನ.

ಕೆ.ಎಂ. ಶ್ರೀನಿವಾಸಮೂರ್ತಿ
ಪತ್ರಕರ್ತರು.ಓಲ್ಡ್‌ಟೌನ್
ಭದ್ರಾವತಿ.

ಬಿ.ಎಸ್. ವೇಣುಗೋಪಾಲನ್,
ಕೆಸ್ತೂರು ಅಂಚೆ,
ತುಮಕೂರು ಜಿಲ್ಲೆ.

ಟಿ.ಬಸಪ್ಪ
ಶ್ರೀರಾಮ ಭಾವಸಾರಕ್ಷತ್ರಿಯಕೋ-ಆಪ-ಸೊಸೈ
ತುಳಜಾಭವಾನಿರಸ್ತೆ, ಶಿವಮೊಗ್ಗ.

ಹನುಮಂತರಾವ್ ಕುಲಕರ್ಣಿ
ನ್ಯೂಸ್ ಏಜಂಟ್,ಬಸ್‌ಸ್ಟಾಂಡ್‌ರೋಡ್
ಗಂಗಾವತಿ.

ಆರ್.ಶೇಷಾದ್ರಿ. ಅರ್ಚಕರು,
ಶ್ರೀಲಕ್ಷ್ಮೀನಾರಾಯಣಸ್ವಾಮಿದೇವಾಲಯ
ಕೊಳ್ಳೇಗಾಲ.

ಬಿ.ಎನ್. ಮುಕುಂದ
1275,ಶ್ರೀಪಾದರಾಜ ಮಠದ ಎದುರು
ಮುಳಬಾಗಿಲು.

ಕೆ.ಎಸ್. ಲಕ್ಷ್ಮೀಕಾಂತ
ಎನ್.ಎ. 93 ಬಿ.ಇ.ಎಲ್. ಕಾಲೋನಿ
ಜಾಲಹಳ್ಳಿ, ಬೆಂಗಳೂರು.

ಟಿ.ಕೆ. ರಾಮಸ್ವಾಮಿ
ತಿರುಪತಿ ವೆಂಕಟೇಶ್ವರ ಸೈಕಲ್‌ಷಾಪ್
ಬಿ.ಎಚ್. ರೋಡ್, ತರೀಕೆರೆ.

ಪ್ರೇಮಾವತಿ
W/o ಪಿ. ಸಾರಂಗಪಾಣಿ. ರೋಜರ್ಸ್ ಕ್ಯಾಂಪ
ಬಿ.ಪಿ. ಬ್ಲಾಕ್
ಮಾರಿಕುಪ್ಪಂ ಕೆ.ಜಿ.ಎಫ್.

ಡಿ. ಗೋಪಾಲಶೆಟ್ಟಿ
ಮದ್ದೂರು.

ಆರ್.ವಾಸುದೇವಶೆಟ್ಟಿ
ದಳಸನೂರು.

★

ಏಜಂಟರಿಲ್ಲದ ಕಡೆ ಏಜಂಟರು ಬೇಕಾಗಿದ್ದಾರೆ. ಅತ್ಯಾಕರ್ಷಕ ಕಮೀಷನ್ ಉಂಟು. ಕೂಡಲೇ ವ್ಯವಹರಿಸಿ.

**ಸಂಪಾದಕರು ತಿ.ತಿ.ದೇ. ತಿರುಪತಿ**

# ವಾರ್ತಾಲಹರಿ

## ತಿರುಮಲೆಯಲ್ಲಿ ಗಣ್ಯರು

ಮಾರಿಷಸ್ ಮಂತ್ರಿ : ಮಾರಿಷಸ್ ದೇಶದ ವಿದ್ಯಾಶಾಖಾಮಂತ್ರಿ ಶ್ರೀ ಪರಶುರಾಮನ್ 12–5–87 ರ ಮಂಗಳವಾರ ಪ್ರಾತಃ ಕಾಲ ಶ್ರೀವೆಂಕಟೇಶ್ವರ ಸ್ವಾಮಿಯ ತೋಮಾಲೆ ಸೇವೆ, ಅರ್ಚನೆ ಕಾರ್ಯಕ್ರಮಗಳಲ್ಲಿ ಪಾಲುಗೊಂಡರು. ಸ್ವಾಮಿ ದರ್ಶನದ ನಂತರ ಡೆಪ್ಯೂಟಿ ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಮುನಿಕೃಷ್ಣನ್ ಅವರು ತಿರುಮಲೆಯ ಬಗೆಗಿನ ತಿ. ತಿ. ದೇ. ಪುಸ್ತಕಗಳನ್ನು ಮಂತ್ರಿ ಮಹೋದಯರಿಗೆ ಬಹೂಕರಿಸಿದರು.

ತಮಿಳುನಾಡು ಮಂತ್ರಿ : ತಮಿಳುನಾಡಿನ ಪಬ್ಲಿಕ್ ವರ್ಕ್ಸ್ ಶಾಖಾಮಂತ್ರಿ ಶ್ರೀ ಕೆ. ಎಸ್. ಎಸ್. ಆರ್. ರಾಮಚಂದ್ರನ್ ಹಾಗೂ ತಮಿಳುನಾಡಿನ ವಿಧಾನಸಭೆಯ ಉಪಸಭಾಪತಿ ಶ್ರೀ ಬಾಲಸುಬ್ರಹ್ಮಣ್ಯಂ ಅವರುಗಳೂ ಮಂಗಳವಾರ 12–5–87 ರಂದು ಸ್ವಾಮಿಯನ್ನು ದರ್ಶಿಸಿ ಆರಾಧಿಸಿದರು.

ಕರ್ನಾಟಕ ಮಂತ್ರಿ : ಕರ್ನಾಟಕದ ರೇಷ್ಮೆ ಇಲಾಖಾ ಮಂತ್ರಿ ಶ್ರೀ ಕೆ. ಎಂ. ಮುನಿಯಪ್ಪ ತಿರುಮಲೆಗೆ ಮೇ 9 ರಂದು ಆಗಮಿಸಿ, ಸ್ವಾಮಿಯನ್ನು ಸಂದರ್ಶಿಸಿ ಆರಾಧಿಸಿದರು.

ಆಂಧ್ರ ಪ್ರದೇಶದ ಮಂತ್ರಿ: ಆಂಧ್ರಪ್ರದೇಶದ ಅರಣ್ಯ ಶಾಖಾಮಂತ್ರಿ ಶ್ರೀ ಮಹಿಪಾಲರೆಡ್ಡಿಯವರು ಏಪ್ರಿಲ್ ತಿಂಗಳ ಕೊನೆಯಲ್ಲಿ ತಿರುಮಲೆಗೆ ಬಂದು ಸ್ವಾಮಿಯನ್ನು ಆರಾಧಿಸಿದರು.

ಆಂಧ್ರ ಪ್ರದೇಶದ ಗವರ್ನರ್ : ಆಂಧ್ರಪ್ರದೇಶದ ರಾಜ್ಯಪಾಲ ಶ್ರೀಮತಿ ಕುಮುದ್ ಬೆನ್ ಜೋಷಿ ಅವರು ಏಪ್ರಿಲ್ 27 ರ ಸಂಜೆ ಆರು ಗಂಟೆಗೆ ತಿರುಮಲೆಗೆ ಆಗಮಿಸಿ ಸ್ವಾಮಿದರ್ಶನವನ್ನು ಪಡೆದರು. ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಸಿ. ಎಚ್. ವೆಂಕಟಪತಿರಾಜು ಅವರು ರಾಜ್ಯಪಾಲರಿಗೆ ಸ್ವಾಗತವನ್ನು ಬಯಸಿದರು. ಶ್ರೀಮತಿಯವರಿಗೆ ಆಲಯದ ರಂಗನಾಯಕ ಮಂಟಪದಲ್ಲಿ ವೇದೋಕ್ತ ಆಶೀರ್ವಾದ ನೀಡಿ, ಶೇಷವಸ್ತ್ರ ಬಹುಮಾನ ನೀಡಲಾಯಿತು. ನಂತರ ಸ್ವಾಮಿಯ ಬಂಗಾರದ ಆಭರಣಗಳನ್ನೂ ತಿ. ತಿ. ದೇ. ನಿರ್ವಹಿಸುತ್ತಿರುವ ಉಚಿತ ಅನ್ನದಾನ ಯೋಜನೆಯ ಕಾರ್ಯರೀತಿಯನ್ನೂ ಅವರು ಪರಿಶೀಲಿಸಿದರು. ರಾಜ್ಯಪಾಲರು ತಿರುಮಲೆಯಲ್ಲಿ ತಿ. ತಿ. ದೇ. ಕೈಗೊಂಡಿರುವ ವನಸಂರಕ್ಷಣಯೋಜನೆಯನ್ನು ಪರಿಶೀಲಿಸಿ, ಯಾತ್ರಿಕರಿಗೆ ಸ್ವಾಮಿಯ ಪ್ರಸಾದ ವೆಂಬಂತೆ ಸಸಿಗಳನ್ನು ನೀಡಿ ಅವರು ಅದನ್ನು ತಮ್ಮ ಮನೆಯ ಬಳಿ ಬೆಳೆಸುವಂತೆ ಮಾಡುವುದರಿಂದ ಪರಿಸರ ರಕ್ಷಣೆಯನ್ನು ಯಶಸ್ವಿಯಾಗಿಸಬಹುದೆಂದು ಅಭಿಪ್ರಾಯ ಪಟ್ಟರು.

## ಶ್ರೀವೆಂಕಟೇಶ್ವರಸ್ವಾಮಿಗೆ ಕಾಣಿಕೆಗಳು

ಮೇ ತಿಂಗಳ 10 ರಂದು ಭಾನುವಾರ ಅಜ್ಞಾತ ಭಕ್ತರೊಬ್ಬರು ಶ್ರೀವೆಂಕಟೇಶ್ವರಸ್ವಾಮಿಯ ಹುಂಡಿಯಲ್ಲಿ ಎರಡೂವರೆ ಲಕ್ಷ ರೂಗಳ ಕಾಣಿಕೆಯನ್ನು ಸಲ್ಲಿಸಿದ್ದು ಕಂಡು ಬಂದಿದೆ.

ದೇವಾಲಯದ ಅಧಿಕಾರಿಗಳು ತಿಳಿಸಿದಂತೆ ಈ ಕಾಣಿಕೆ ಪ್ಲಾಸ್ಟಿಕ್ ಚೀಲವೊಂದರಲ್ಲಿ ತುಂಬಿದ 19 ಕಟ್ಟುಗಳ ನೂರುರೂಗಳ ನೋಟುಗಳೂ, ವಿಸ್ಕೃತಹಣದ ಬೇರೆ ಬೇರೆ ಮೌಲ್ಯದ ನೋಟುಗಳೂ ಆಗಿದ್ದಿತು.

ಇದೇ ರೀತಿ ಆ ಹಿಂದಿನ ದಿನ ಶನಿವಾರವೂಸಹ ಅಜ್ಞಾತ ಭಕ್ತರೊಬ್ಬರು ಕಾಣಿಕೆಯಾಗಿ 25 ಲಕ್ಷ ರೂಗಳನ್ನು ಸಲ್ಲಿಸಿದ್ದರೆಂದು ವರದಿಯಾಗಿದೆ.

ಅದಕ್ಕೂ ಹಿಂದೆ ಅಜ್ಞಾತ ಭಕ್ತರೊಬ್ಬರು ಪ್ರತಿಯೊಂದೂ 116.5 ಗ್ರಾಂ ತೂಕವಿರುವ ಐದು ಬಂಗಾರದ ಬಿಸ್ಕೆಟ್‌ಗಳನ್ನು ಹುಂಡಿಯಲ್ಲಿ ಹಾಕಿದ್ದರೆಂದು ವರದಿಯಾಗಿದೆ.

## 1987-88 ರ ತಿ. ತಿ. ದೇ. ಆಯವ್ಯಯ ಅಂಗೀಕಾರ

1987–88 ರಲ್ಲಿ ತಿ. ತಿ. ದೇವಸ್ಥಾನಗಳ ಆದಾಯ 70 ಕೋಟಿರೂಗಳನ್ನು ಮುಟ್ಟುವುದು ಎಂದು ಹೇಳಲಾಗಿದೆ.

ಈ ಆದಾಯದ ಬಹುಭಾಗ ಶ್ರೀವೆಂಕಟೇಶ್ವರ ಸ್ವಾಮಿಯ ಹುಂಡಿಯ ಮೂಲಕ ಹಾಗೂ ವಿಶೇಷ ಪ್ರವೇಶದ ಟಿಕೆಟ್‌ಗಳ ಮೂಲಕ ಉಂಟಾಗುವುದೆಂದು ತಿ. ತಿ. ದೇ. ಅಧ್ಯಕ್ಷ ಶ್ರೀ ಡಿ. ಸಿತಾರಾಮಯ್ಯನವರು ತಿಳಿಸಿದರು.

ಆಯವ್ಯಯವನ್ನು ಅಂಗೀಕರಿಸಿದ ತಿ. ತಿ. ದೇ. ಟ್ರಸ್ಟ್ ಬೋರ್ಡ್‌ನ ಆಂಧ್ರ ಪ್ರದೇಶದ ವಿವಿಧ ಮಂಡಲಗಳಲ್ಲಿ ಕಲ್ಯಾಣಮಂಟಪಗಳನ್ನು ನಿರ್ಮಿಸಲು 2 ಕೋಟಿ ರೂಗಳನ್ನು ಮೀಸಟ್ಟಿದೆ. 20 ಕೋಟಿ ರೂಗಳಷ್ಟು ಡಿಪಾಸಿಟ್ಸ್, ಬಾಂಡ್‌ಗಳ ಕೊಳ್ಳುವಿಕೆಯೂ 16 ಕೋಟಿರೂಗಳಷ್ಟು ಸಿಬ್ಬಂದಿ ನಿರ್ವಹಣೆಯ ವೆಚ್ಚ, ಮತ್ತು ಇಪ್ಪತ್ತು ಕೋಟಿರೂಗಳಷ್ಟು ಭವನ ನಿರ್ಮಾಣ ವೆಚ್ಚಗಳೂ ಇವೆ. ಇದರಲ್ಲಿ ಸಪ್ತಗಿರಿ ಸತ್ರಗಳಿಗಾಗಿ 2 ಕೊಟಿ ರೂಗಳೂ, ಸೂಪರ್‌ಸ್ಪೆಷಾಲಿಟಿ ಆಸ್ಪತ್ರೆಗಾಗಿ 2 ಕೋಟಿ ರೂಗಳೂ ಸೇರಿವೆ.

1978–79 ರಲ್ಲಿ ಶ್ರೀವೆಂಕಟೇಶ್ವರಸ್ವಾಮಿ ಆದಾಯ ಕೇವಲ 16 ಕೋಟಿ ರೂಗಳಾಗಿದ್ದು, ಪ್ರತಿವರ್ಷ ತಿರುಮಲೆಯನ್ನು ಸಂದರ್ಶಿಸುವ ಯಾತ್ರಿಕರ ಸಂಖ್ಯೆ ಕ್ರಮವಾಗಿ ಹೆಚ್ಚುತ್ತಿದ್ದು, 1982–83 ರಲ್ಲಿ ಆದಾಯ 33 ಕೋಟಿ ರೂಗಳಾಗಿ, 1985-86 ರಲ್ಲಿ ಈ ಆದಾಯ 51 79 ಕೋಟಿ ರೂಗಳಾಗಿದ್ದಿತು.

## ತಿರುಮಲೆಯಲ್ಲಿ ಹೊಸ ಸತ್ರಗಳು

ತಿರುಮಲೆಯಲ್ಲಿ ಎಲ್ಲ ರೀತಿಯ ಸೌಲಭ್ಯಗಳಿರುವ ಹೊಸ ಸತ್ರಗಳನ್ನು ನಿರ್ಮಿಸಿ ಇಲ್ಲಿಗೆ ಸಂದಣಿಯ ದಿನಗಳಲ್ಲಿ ಆಗಮಿಸುವ ಯಾತ್ರಿಕರಿಗೆ ದಿನಕ್ಕೆ 40,000 ಮಂದಿಗೆ ವಸತಿ ಸೌಲಭ್ಯ ಕಲ್ಪಿಸಲಾಗುವುದು ಎಂದು ಆಂಧ್ರಪ್ರದೇಶದ ದೇವಾದಾಯ ಶಾಖಾಮಂತ್ರಿ ಶ್ರೀ ಎನ್ ಯತಿರಾಜಾರಾವ್ ಅವರು ತಿಳಿಸಿದರು.

ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಸಿ. ಎಚ್. ವೆಂಕಟಪತಿರಾಜು ಅವರೊಂದಿಗೆ ಪತ್ರಿಕಾ ಗೋಷ್ಠಿಯಲ್ಲಿ ಮಾತನಾಡುತ್ತ ಅವರು ಸಧ್ಯಕ್ಕೆ ತಿರುಮಲೆಯಲ್ಲಿನ ವಸತಿ ದಿನಂಪ್ರತಿ 20,000 ಮಂದಿಗೆ ಸಾಕಾಗುತ್ತದೆಯೆಂದು ತಿಳಿಸಿದರು

ಪ್ರಸಕ್ತ ವರ್ಷದಲ್ಲಿ ಎಲ್ಲ ಮಂಡಲ ಕೇಂ ಳಲ್ಲಿ, ಜಿಲ್ಲಾ ಕೇಂದ್ರಗಳಲ್ಲಿ ಮುನಿಸಿಪಲ್ ಕೇ ಗಳಲ್ಲಿ ಸುಮಾರು ಐವತ್ತು ಕಲ್ಯಾಣ ಮಂ ಳನ್ನು ನಿರ್ಮಿಸಲು ತಿ. ತಿ. ದೇವಸ್ಥಾನಗಳು ಆ ಕರಿಸಿದೆಯೆಂದು ಅವರು ನುಡಿದರು.

## ತಿರುಮಲೆಯಲ್ಲಿ ಕಾಟೇಜುಗ ಬಾಡಿಗೆ ಹೆಚ್ಚಳ

ಮೇ 1 ರಿಂದ ತಿರುಮಲೆಯಲ್ಲಿ ಕಾಟೇಜು ಬಾಡಿಗೆಯನ್ನು ಹೆಚ್ಚಿಸಲಾಗಿದೆ. ನಿತ್ಯಾವ ನಿರ್ವಹಣಾವೆಚ್ಚಗಳ ಹೆಚ್ಚಳದಿಂದಾಗಿ ಈ ಬಾ ದರಗಳನ್ನೂ ಹೆಚ್ಚಿಸಲಾಗಿಗೆ ಎಂದು ಹೇಳ ಗಿದೆ. ಇಲ್ಲಿನ ಶಂಕುಮಿಟ್ಟ, ಅಂಜನಾದ್ರಿನ ಶೇಷಾದ್ರಿನಗರ, ಗರುಡಾದ್ರಿನಗರ ಕಾಟೇಜು ಬಾಡಿಗೆಯನ್ನು 20 ರೂಗಳಿಂದ 25 ರೂಗಳ ನಾರಾಯಣಗಿರಿ ಕಾಟೇಜುಗಳ ಬಾಡಿಗೆಯ 75 ರೂಗಳಿಂದ 100 ರೂಗಳಿಗೂ ಟಿ. ಬಿ. ಕೋಣೆಗಳ ಬಾಡಿಗೆಯನ್ನು 60 ರೂಗಳಿಂದ ರೂಗಳಿಗೂ ಎಚ್ ಆರ್. ಜಿ. ಕಾಟೇಜು ಬಾಡಿಗೆಯನ್ನು 150 ರೂಗಳಿಂದ 200 ರ ಳಿಗೂ ಏರಿಸಲಾಗಿದೆ. (ಈ ಬಗ್ಗೆ ವಿವರ ಪಟ್ಟಿ 2 ಪುಟದಲ್ಲಿ ನೀಡಲಾಗಿದೆ)

## ಧಾರ್ಮಿಕ ಶಿಕ್ಷಣ ತರಬೇತಿ ಶಿ

ತಿರುಪತಿಯಲ್ಲಿ ಹದಿನೈದು ದಿನಗಳ ಬೇಸಗೆ ಧಾರ್ಮಿಕ ಶಿಕ್ಷಣ ತರಬೇತಿ ಶಿಬಿರ 16–5– ರಿಂದ 30–5–87 ರವರೆಗೆ ಹಿಂದೂ ಧರ್ಮರಕ್ಷ ಸಂಸೆಯ ಆಶ್ರಯದಲ್ಲಿ ನಡೆಸಲು ಯೋಜಿಸ ಗಿದ್ದೂ 16–5–87 ರಂದು ಸರಳ ಸಮಾರಂ ಮೂಲಕ ಆರಂಭವಾಯಿತು.

ತಿ. ತಿ. ದೇವಸ್ಥಾನಗಳ ಸಂರಕ್ಷಣಾಧಿಕಾರಿ ಜಯಚಂದ್ರ ಐ. ಪಿ. ಎಸ್. ಅವರ ಅಧ್ಯಕ್ಷತೆಯ ನಡೆದ ಆರಂಭೋತ್ಸವದ ಸಭೆಯಲ್ಲಿ ತಿ. ತಿ. ಬೋರ್ಡ್ ಸದಸ್ಯ ಶ್ರೀ ಐ. ಎಲ್. ಎಸ್. ಶಾ ಅವರು ಮುಖ್ಯ ಅತಿಥಿಯಾಗಿ ಪಾಲುಗೊಂಡಿದ್ದ ಶ್ರೀ ಎಂ. ವಿ. ಎಸ್. ಶಾಸ್ತ್ರಿ ಅವರು, ಸಭೆಯನ ತರಬೇತಿ ಪಡೆಯುವ ಶಿಬಿರದ ಶಿಕ್ಷಣಾರ್ಥಿಗಳನ ಸ್ವಾಗತಿಸಿದರು. ಹಿಂದೂ ಧರ್ಮ ರಕ್ಷಣ ಸಂಸ್ಥೆ ಕಾರ್ಯದರ್ಶಿ ಶ್ರೀ ಸಮುದ್ರಾಲ ಲಕ್ಷ್ಮಣಾ ನಾಯುಡು ಅವರು ವರದಿಯನ್ನು ಓದುತ್ತ 19 –87 ರಲ್ಲಿ ಎಚ್. ಡಿ. ಆರ್. ಎಸ್. ನ ಬಜೆ 40 ಲಕ್ಷ ರೂಗಳಿದ್ದದ್ದು 1987–88 ರಲ್ಲಿ 4 ಲಕ್ಷ ರೂಗಳಾಗಿವೆಯೆಂದು ತಿಳಿಸುತ್ತ, ಈ ಶಿ ದಲ್ಲಿ ತರಬೇತಿ ಪಡೆಯಲು 50 ಮಂದಿ ಶಿಕ್ಷಕರ ಆಹ್ವಾನಿಸಲಾಗಿದೆಯೆಂದೂ, ಇವರಿಗೆ ಹಿಂ

ಧರ್ಮದ ಮೌಲ್ಯ ಪ್ರಸಾರದಲ್ಲಿ ಶಿಕ್ಷಣ ನೀಡಲಾಗುವುದೆಂದೂ ತಿಳಿಸಿದರು.

ಹದಿನೈದು ದಿನಗಳ ಈ ಶಿಬಿರದಲ್ಲಿನ ಶಿಕ್ಷಣಾರ್ಥಿಗಳಿಗೆ ಯೋಗ, ಗೀತಾ, ಉಪನ್ಯಾಸ, ಹರಿಕಥೆ, ಸಾಮೂಹಿಕ ಪ್ರಾರ್ಥನೆ ಮೊದಲಾದವುಗಳಲ್ಲಿ ವಿಶೇಷ ಪರಿಣತರಿಂದ ಉಪದೇಶ, ಉಪನ್ಯಾಸ, ಪ್ರಾಯೋಗಿಕೆಗಳನ್ನು ನೀಡಲಾಗುವುದು.

ಇಲ್ಲಿ ತರಬೇತಿ–ಶಿಕ್ಷಣವನ್ನು ಹೊಂದಿದ ಶಿಕ್ಷಕರು ತಮ್ಮ ತಮ್ಮ ಶಾಲೆಗಳಲ್ಲಿ ಹಿಂದೂ ಧರ್ಮದ ಸಾರ್ವತ್ರಿಕ, ಮಾನವಿಕ ಮೌಲ್ಯಗಳನ್ನು ಪ್ರಸಾರ ಮಾಡುವುದರ ಮೂಲಕ ದೇಶದ ಅಭ್ಯುದಯಕ್ಕೆ ಕಾರಣರಾಗಬೇಕೆಂದು ಕರೆ ನೀಡಲಾಯಿತು.

## ಸಹ ಕಾರ್ಯನಿರ್ವಹಣಾಧಿಕಾರಿ ವರ್ಗಾವಣೆ

ತಿ. ತಿ. ದೇವಸ್ಥಾನಗಳ ಸಹಕಾರ್ಯನಿರ್ವಹಣಾಧಿಕಾರಿ ಶ್ರೀ ವೈ. ಚಕ್ರಧರರಾವ್ ಅವರಿಗೆ ವಿಜಯವಾಡದ ನಗರಾಭಿವೃದ್ಧಿ ಸಂಸ್ಥೆಯ ನಿರ್ದೇಶಕರಾಗಿ ವರ್ಗಾವಣೆ ಆಗಿದ್ದು, ಅವರು ತಮ್ಮ ಸಹಕಾರ್ಯನಿರ್ವಹಣಾಧಿಕಾರಿ ಪದವಿಯ ಬಾಧ್ಯತೆಗಳನ್ನು ಒಪ್ಪಿಸಿ ಹೊರಹೊರಟಿದ್ದಾರೆ. ಅವರ ಸ್ಥಾನದಲ್ಲಿ ನೆಲ್ಲೂರಿನ ಡೆಪ್ಯೂಟಿ ಕಲೆಕ್ಟರ್ ಆಗಿ ಕೆಲಸ ನಿರ್ವಹಿಸುತ್ತಿದ್ದ ಶ್ರೀ ವಿಶ್ವನಾಥ್ ಅವರನ್ನು ನೇಮಕ ಮಾಡಲಾಗಿದೆ. ಶ್ರೀ ವೈ. ಚಕ್ರಧರರಾವ್ ಅವರು ಶಿಸ್ತಿನ ಮನುಷ್ಯ ಎಂದು ಹೆಸರುಗಳಿಸಿ ತಿ. ತಿ. ದೇ. ಗಳ ಅನೇಕ ಆಕ್ರಮಿತ ಜಮೀನುಗಳನ್ನು ತಿ. ತಿ. ದೇವಸ್ಥಾನಗಳಿಗೆ ವಾಪಸು ಪಡೆಯುವಲ್ಲಿ ಹೆಸರಾದವರಾಗಿದ್ದರು.

## ಅನ್ನಮಾಚಾರ್ಯ ಜಯಂತಿ ಉತ್ಸವದ ಆರಂಭ

ತಾಳ್ಳಪಾಕ ಅನ್ನಮಾಚಾರ್ಯರ 579 ನೇ ಜಯಂತಿಯನ್ನು ತಿರುಪತಿಯಲ್ಲಿ ಸಡಗರ ಸಂಭ್ರಮಗಳಿಂದ ಒಂದು ವಾರಕಾಲ ಆಚರಿಸಲು ಯೋಜಿಸಲಾಗಿದ್ದು 13–5–87 ರಂದು ತಿ.ತಿ.ದೇ. ಗಳ ಅಧ್ಯಕ್ಷ ಶ್ರೀ ದೇವಿನೇನಿ ಸೀತಾರಾಮಯ್ಯ ಅವರ ಅಧ್ಯಕ್ಷತೆಯಲ್ಲಿ ಆಂಧ್ರಪ್ರದೇಶದ ದೇವಾದಾಯ ಇಲಾಖಾ ಮಂತ್ರಿ ಶ್ರೀ ಎಸ್. ಯತಿರಾಜರಾವ್ ಅವರು ದೀಪ ಬೆಳಗಿಸುವುದರ ಮೂಲಕ ಆರಂಭವಾಯಿತು.

ಉದ್ಘಾಟನೆಯ ಸಮಾರಂಭದಲ್ಲಿ ಮಾತನಾಡುತ್ತ ಶ್ರೀ ಯತಿರಾಜಾರಾವ್ ಅವರು ಅನ್ನಮಾಚಾರ್ಯರು ವಿಶೇಷ ಪ್ರತಿಭಾಶಾಲಿ ಕವಿಯೆಂದೂ, ಅತ ರಚಿಸಿದ ಹಲವಾರು ಕೀರ್ತನೆಗಳು ಇಂದಿನ ಸಾಮಾಜಿಕ ಧಾರ್ಮಿಕ ಪರಿಸ್ಥಿತಿಯಲ್ಲೂ ಒಳಿತಿಗೆ ಮಾರ್ಗದರ್ಶಿ ಆಗಬಲ್ಲವೆಂದೂ ನುಡಿದರು.

ಅನ್ನಮಾಚಾರ್ಯರು ರಚಿಸಿದ ಪದ್ಮಾವತೀ ದೇವಿಯ ಬಗೆಗಿನ ಹಾಗೂ ಹನುಮಂತನ ಬಗೆಗಿನ ಕೃತಿಗಳ ಎರಡು ಕ್ಯಾಸೆಟ್‌ಗಳನ್ನೂ ಮಂತ್ರಿವರ್ಯರು ಬಿಡುಗಡೆ ಮಾಡಿದರು. ಕವಿಯ ವಂಶೀಕರನ್ನೂ ಅವರು ಸನ್ಮಾನಿಸಿದರು.

ಕಾರ್ಯನಿರ್ವಹಣಾಧಿಕಾರಿ ಶ್ರೀ ಸಿ. ಎಚ್. ವೆಂಕಟಪತಿರಾಜು ಅವರು ಸ್ವಾಗತಿಸಿದ ಆರಂಭೋತ್ಸವ ಸಭೆಯಲ್ಲಿ ವರದಿಯನ್ನು ವಿಶೇಷಾಧಿಕಾರಿ ಶ್ರೀ ಮೇಡಸಾನಿ ಮೋಹನ್ ಓದಿದರು. ನಿಘಾ ಅಧಿಕಾರಿ ಶ್ರೀ ಜಯಚಂದ್ರ ವಂದನಾರ್ಪಣೆ ಮಾಡಿದರು.

ಏಳುದಿನಗಳ ಈ ಉತ್ಸವಗಳಲ್ಲಿ ಬೆಳಗಿನ ಹೊತ್ತು ಅನ್ನಮಾಚಾರ್ಯ ಕಲಾಮಂದಿರದಲ್ಲಿ ಸಂಜೆಯ ಹೊತ್ತು ತಿ. ತಿ. ದೇವಸ್ಥಾನಗಳ ಪರಿಪಾಲನಾಭವನದ ಹಿಂಭಾಗದ ಬಯಲು ರಂಗಮಂಟಪದಲ್ಲಿ ಸಂಗೀತ, ನೃತ್ಯ, ಉಪನ್ಯಾಸ, ಕಾರ್ಯಕ್ರಮಗಳನ್ನು ಏರ್ಪಡಿಸಲಾಗಿದ್ದು, ನಾಡಿನ ಖ್ಯಾತ ವಿದ್ವಾಂಸರುಗಳು ಪಾಲುಗೊಳ್ಳುವರೆಂದು ವರದಿಯಾಗಿದೆ.

(ವಿವರವಾದ ವರದಿಯನ್ನು ಜುಲೈ ಸಂಚಿಕೆಯಲ್ಲಿ ನೋಡಬಹುದು)

## ಶಿಲಾವಿಗ್ರಹ ನೀಡಿಕೆ ಯೋಜನೆಗಳು

ವಿವಿಧ ಹಿಂದೂ ದೇವಾಲಯಗಳಲ್ಲಿ ಪ್ರತಿಷ್ಠಾಪನೆಗಾಗಿ ತಿ. ತಿ. ದೇವಸ್ಥಾನಗಳು ಶಿಲಾವಿಗ್ರಹ ನೀಡುವಿಕೆಯ ಎರಡು ಯೋಜನೆಗಳನ್ನು ಅಂಗೀಕರಿಸಿವೆ.

ವಿಗ್ರಹ ದಾನ ಯೋಜನೆಯಲ್ಲಿ ವಿವಿಧ ದೇವಾಲಯಗಳಿಗೆ ಪ್ರತಿಷ್ಠಾಪನೆಗಾಗಿ ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀದೇವಿಯವರ ವಿಗ್ರಹಗಳನ್ನು ನೀಡಲಾಗುವುದು. ಇದಕ್ಕಾಗಿ ಅರ್ಜಿಗಳನ್ನು ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿಗಳಿಗೆ ಕಳುಹಿಸಬೇಕು. ಜೊತೆಗೇ ದೇವಾಲಯದ ನಕ್ಷೆ, ಮಂಡಲ ಅಧಿಕಾರಿ ಅಥವಾ ಅಸಿಸ್ಟೆಂಟ್ ಕಮೀಷನರ್‌ಗಿಂತ ಕಡಮೆಯವರಲ್ಲದ ಸ್ಥಳೀಯ ದೇವಾಲಯ ಆಲಾಖಾಧಿಕಾರಿಗಳಿಂದ ಪ್ರಮಾಣಪತ್ರಗಳನ್ನು ಕಳುಹಿಸಬೇಕು;

ಹಿಂದೂ ದೇವಾಲಯಗಳಿಗಾಗಿ ಇತರ ಎಲ್ಲ ದೇವ ದೇವತೆಯರ ವಿಗ್ರಹಗಳನ್ನೂ 50% ರಿಯಾಯಿತಿ ದರದಲ್ಲಿ ಒದಗಿಸಲಾಗುವುದು. ಇದಕ್ಕಾಗಿಯೂ ಅರ್ಜಿಗಳನ್ನು ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿಯವರಿಗೆ ಕಳುಹಿಸಬೇಕು. ಜೊತೆಗೇ ದೇವಾಲಯದ ನಕ್ಷೆ, ಮಂಡಲಾಧಿಕಾರಿ ಅಥವಾ ಅಸಿಸ್ಟೆಂಟ್ ಕಮೀಷನರ್ ಅವರ ಸ್ಥಾಯಿಯ ಸ್ಥಳೀಯ ಮುಜರಾಯಿ ಅಧಿಕಾರಿಯ ಪ್ರಮಾಣಪತ್ರವನ್ನು ಕಳುಹಿಸಬೇಕು.

ಕಾಲದಿಂದ ಕಾಲಕ್ಕೆ ತಿ. ತಿ. ದೇ. ಆಡಳಿತ ನಿರ್ವಾಹಕಮಂಡಳಿಯು ವಿಧಿಸುವ ಶರತ್ತುಗಳಿಗೆ ಅನುಗುಣವಾಗಿ ವಿಗ್ರಹಗಳನ್ನು ಸರಬರಾಜು ಮಾಡಲಾಗುವುದು.

ಈ ವಿಷಯದಲ್ಲಿನ ಎಲ್ಲ ವ್ಯವಹಾರಗಳಿಗೂ ಬರೆಯಬೇಕಾದ ವಿಳಾಸ – ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇ. ತಿರುಪತಿ–517501.

## ಮುಂದಿನ ಸಂಚಿಕೆಯಲ್ಲಿ .... .... ....

### ಸಪ್ತಗಿರಿ. — ಜುಲೈ 1987

**ಅಷ್ಟಾವಧಾನ**
– ವಿದ್ವಾನ್ ಬ ನ ಗುಂಡೂರಾವ್

**ವೈದಿಕ ಋಷಿಗಳು**
– ಪಂಡರಿನಾಥಾಚಾರ್ಯಗಲಗಲಿ

**ಉರಗಪತಾಕ**
– ಭಾರ್ಗವಿಶ್ರೀ

**ಕಳಶ**
– ಅದ್ಯರಾಮಾಚಾರ್ಯ

**ಸಂಸಾರ–ಸಾಗರ**
– ವಿದ್ವಾನ್ ಬಾಲಗಣಪತಿಭಟ್ಟ

ಧಾರಾವಾಹಿ : ಗೋದಾದೇವೀ ಕೃತ ತಿರುಪ್ಪಾವೈನ ಸಚಿತ್ರ ವಿವರಣೆ.

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.** ಬೆಲೆ : ರೂ. 1–00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12–00 ಮಾತ್ರ. ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದದಲ್ಲೂ ಬರೆಯಬೇಕು. ಬರೆಯಿರಿ – ಸಂಪಾದಕರು
ಸೇಲ್ಸ್‌ವಿಂಗ್. ತಿ.ತಿ.ದೇ. ತಿರುಪತಿ.

# ತಿಂಗಳಿನ ಮುಖ್ಯದಿನಗಳು

## ಜುಲೈ 1987

| | | |
|---|---|---|
| 3. | ಶುಕ್ರವಾರ | ಮಂಗಾಪುರಂ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಸಾಕ್ಷಾತ್ಕಾರ ವೈಭವ |
| 4. | ಶನಿವಾರ | ಸಾಮವೇದ ಉಪಾಕರ್ಮ |
| 6. | ಸೋಮವಾರ | ಪೆರಿಯಾಳ್ವಾರ್ ಶಾತ್ತುಮೊರೆ |
| 8. | ಬುಧವಾರ | ನಾಥಮುನಿಗಳ ವರ್ಷತಿರುನಕ್ಷತ್ರ |
| 10. | ಶುಕ್ರವಾರ | ಯಾಜ್ಞವಲ್ಕ್ಯ ಉಪಾಕರ್ಮ |
| 11. | ಶನಿವಾರ | ಗಾಯತ್ರೀ ಜಪ |
| 13. | ಸೋಮವಾರ | ಋಗ್ವೇದೋಪಾಕರ್ಮ |
| 14. | ಮಂಗಳವಾರ | ಶ್ರೀ ಸುಂದರರಾಜಸ್ವಾಮಿ ಅವತಾರೋತ್ಸವ ಆರಂಭ |
| 16. | ಗುರುವಾರ | " " " ಸಮಾಪ್ತಿ |
| 17. | ಶುಕ್ರವಾರ | ದಕ್ಷಿಣಾಯನ ಆರಂಭ, ಆನಿವರ ಆಸ್ಥಾನ. |
| 26. | ಭಾನುವಾರ | ಚಕ್ರತ್ತಾಳ್ವಾರ್ ವರ್ಷತಿರುನಕ್ಷತ್ರ |
| 28. | ಮಂಗಳವಾರ | ಮಂಗಳ ಗೌರೀವ್ರತ |
| 29. | ಬುಧವಾರ | ನಾಗಚತುರ್ಥಿ, ಆಂಡಾಳ್ ತಿರುವಾಡಿಪ್ಪೂರಂ ಶಾತ್ತುಮೊರೆ. |
| 30. | ಗುರುವಾರ | ಗರುಡ ಪಂಚಮಿ |
| 31. | ಶುಕ್ರವಾರ | ಕಲ್ಕಿ ಜಯಂತಿ |

# ಶ್ರೀ ಗೋವಿಂದರಾಜಸ್ವಾ
# ದೇವಾಲಯ, ತಿರುಪತಿ

## ದರ್ಶನ ಹಾಗೂ
## ಸೇವಾ ವಿವರಗಳು

| | ರಿಂದ | ವ |
|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5– |
| ವಿಶ್ವರೂಪ ಸರ್ವದರ್ಶನ* | ಪ್ರಾ 5–30 | ಪ್ರಾ 7– |
| ತೋಮಾಲ ಸೇವೆ | ಪ್ರಾ 7–30 | ಪ್ರಾ 8– |
| (ಆರ್ಜಿತ ಪ್ರತಿವ್ಯಕ್ತಿಗೆ ರೂ 4–00) | | |
| ಅರ್ಚನ | ಪ್ರಾ 8–00 | ಪ್ರಾ 8– |
| (ಆರ್ಜಿತ ಪ್ರತಿವ್ಯಕ್ತಿಗೆ ರೂ 4–00) | | |
| ಸರ್ವದರ್ಶನ | ಪ್ರಾ 9–00 | ಮ 12– |
| | ಮ. 1–00 | ಸಂ 6– |
| | ರಾ 7–00 | ರಾ 8– |
| ಏಕಾಂತಸೇವೆ. | | ರಾ 9–00 |

* ಶುಕ್ರವಾರ, ಏಕಾದಶಿ, ಉತ್ತರಾನಕ್ಷತ್ರದ ಮಂತ್ರಿತರ ಹಬ್ಬ ಹರಿದಿನಗಳಲ್ಲಿ ವಿಶ್ವರೂ ಸರ್ವದರ್ಶನವು ಪ್ರಾ 5–30 ರಿಂದ ಪ್ರಾ 6–30 ವರೆಗೆ ಮಾತ್ರ.

## ಆರ್ಜಿತ ಸೇವೆಗಳು

| | | |
|---|---|---|
| 1. | ಗರುಡವಾಹನ | 32– |
| 2. | ಚಂದ್ರಪ್ರಭ ವಾಹನ | 32– |
| 3. | ಗಜವಾಹನ | 32– |
| 4. | ಅಶ್ವವಾಹನ | 32– |
| 5. | ಸಿಂಹವಾಹನ | 32– |
| 6. | ಹಂಸವಾಹನ | 32– |
| 7. | ಚಿಕ್ಕಶೇಷವಾಹನ | 32– |
| 8. | ದೊಡ್ಡ ಶೇಷವಾಹನ | 62– |
| 9. | ಸೂರ್ಯಪ್ರಭವಾಹನ | 62– |

## ಪಡಿಪ್ರಸಾದಗಳು

| | | | |
|---|---|---|---|
| 1. | ದೋಸೆ | ಕಾಲಸೋಲ | 35– |
| 2. | ದಧ್ಯೋದನ | " | 40– |
| 3. | ಪುಳಿಯೋಗರೆ | " | 50– |
| 4. | ಪೊಂಗಲು | " | 55– |
| 5. | ಸಕ್ಕರಪೊಂಗಲ್ | " | 65– |
| 6. | ಶಾಕರ ಭಾತ್ | | 85– |
| 7. | ಕೇಸರೀ ಭಾತ್ | | [illegible]0– |
| 8. | ಸೀರ | | 155– |

ವಿವರಗಳಿಗೆ

**ಪೇಷ್ಕಾರ್**

ಶ್ರೀ ಗೋವಿಂದರಾಜಸ್ವಾಮಿ ದೇವಾಲಯ
ತಿರುಪತಿ

Edited and Published on behalf of the T. T. Devasthanams by K. Subba Rao, M.A., and Printed at T. T. D. Press by M. Vijayakumar Reddy, Manager, T. T. D. Press, Tirupati – 517501.

